# ಚಂದಮಾಮ ಕ್ಯಾಮಲ್
## ಬಣ್ಣ ಹಾಕುವ ಸ್ಪರ್ಧೆ
ಪ್ರವೇಶಧನವಿಲ್ಲ




**ಬಹುಮಾನ ಗಳಿಸಿರಿ.**

ಕ್ಯಾಮಲ್ — ಪ್ರಥಮ ಬಹುಮಾನ ರೂ. 15
ಕ್ಯಾಮಲ್ — ದ್ವಿತೀಯ ಬಹುಮಾನ ರೂ. 10
ಕ್ಯಾಮಲ್ — ತೃತೀಯ ಬಹುಮಾನ ರೂ. 5
ಕ್ಯಾಮಲ್ — 5 ಪ್ರೋತ್ಸಾಹಕ ಬಹುಮಾನಗಳು
ಕ್ಯಾಮಲ್ — 10 ಸರ್ಟಿಫಿಕೇಟ್‌ಗಳು

-ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿರಿ.-



ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ
**P.B. No. 9928, COLABA, Bombay-400 005.**
ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name ______________________ Age ______________

Address ______________________________________

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

ದಯವಿಟು ಚಿತ ವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.
ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು: *31 - 5 - 1981*

Vision

**CONTEST No.19**



# ಚಂದಮಾಮ

ಮೇ 1981



ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೧-೫೦

ವಾರ್ಷಿಕ ಚಂದಾ ರೂ. ೧೮-೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ


**ಈ** ಪ್ರಪಂಚ ವ್ಯವಹಾರದಲ್ಲಿರುವಾಗ, ಯಾವುದೋ ಒಂದು ಪರಿಸ್ಥಿತಿಯಲ್ಲಿ ಅದೃಷ್ಟ ಕೂಡಿ ಅದ್ಭುತ ಶಕ್ತಿ ಆಕಸ್ಮಿಕವಾಗಿ ಯಾರಿಗಾದರೂ ಬಂದೀತು. ಆಶಾಪಾತಕರೂ, ವಿವೇಕ ಹೀನರೂ ತಮ್ಮ ದುರ್ಗುಣಗಳ ಒತ್ತಡದಿಂದ ವಿಪರೀತ ಫಲವನ್ನೇ ಪಡೆದು ಕಷ್ಟಗಳಿಗೆ ಸಿಕ್ಕಿ ಬೀಳುತ್ತಾರೆ. ಈ ಸಂಚಿಕೆಯಲ್ಲಿರುವ "ಅತ್ಯಾಶೆಗೊಂದು ಅಂತ್ಯ" ಎಂಬ ಸಣ್ಣ ಕತೆ ಇದನ್ನು ಮನೋರಂಜಕವಾಗಿ ತಿಳಿಸುತ್ತದೆ.

## ಅಮರವಾಣಿ

**ಜಾತಮಾತ್ರಂ ನಯಃ ಶತ್ರುಂ ವ್ಯಾಧಿಂ ಚ ಶಮನಂ ನಯೇತ್**
**ಅತಿ ಪುಷ್ಟಾಂಗ ಯುಕ್ತೋಽಪಿ ನ ಪಶ್ಚಾತ್ತೇನ ಮಾನ್ಯತೇ**

ತಾನು ಬಲಶಾಲಿಯಾಗಿದ್ದರೂ, ಒಳ್ಳೆಯ ಆರೋಗ್ಯವಂತನಾಗಿದ್ದರೂ ಅಪಾಯಕಾರಿಯಾದ ಶತ್ರುವನ್ನು ಅಥವಾ ವ್ಯಾಧಿಯನ್ನು ಕೂಡಲೇ ನಾಶಮಾಡಬೇಕು. ಅಜಾಗ್ರತೆಯಿಂದ ಅಪಾಯ ತಪ್ಪದು.


ಸಂಪುಟ : ೬೬ ಮೇ '೮೧ ಸಂಚಿಕೆ : ೫

**ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦**





CHITRA



# ವಿಚಿತ್ರಪುರಿ

ಅನೇಕ ವರ್ಷಗಳ ಹಿಂದೆ ಮಂದರಗಿರಿ ಎಂಬೊಂದು ಊರಿನಲ್ಲಿ ವೆಂಕಟ್ರಾಮನೆಂಬ ಒಬ್ಬ ಯುವಕನಿದ್ದನು. ಅವನು ಚಿಕ್ಕ ಹುಡುಗನಾಗಿದ್ದಾಗ ಯಾವಾಗಲೂ ತನ್ನ ಅಜ್ಜಿಯನ್ನೇ ಅಂಟಿಕೊಂಡಿರುವನು. ಅಜ್ಜಿಗೂ ಅವನೆಂದರೆ ಬಹಳ ಅಚ್ಚೆ. ಆಕೆ ಅವನಿಗೆ ಚಿತ್ರ ವಿಚಿತ್ರವಾದ ಸಂಗತಿ ಹೇಳುತ್ತಿದ್ದಳು. "ಮಂದರ ಗಿರಿಯ ಪಡುಗಡೆಯ ಗುಡ್ಡದಾಚೆಗೆ ವಿಚಿತ್ರಪುರಿ ಎಂಬ ಊರಿನಲ್ಲಿ ಎಲ್ಲವೂ ವಿಚಿತ್ರವಾಗಿರುತ್ತೆ. ದೊಡ್ಡವನಾದ ಮೇಲೆ ಹೋಗಿ ನೋಡು! ಅಲ್ಲಿರುವವರಿಗೆಲ್ಲಾ ಅದ್ಭುತ ವಿದ್ಯೆ ತುಂಬಾ ಗೊತ್ತಿದೆ. ಭಾರೀ ಚಮತ್ಕಾರ ತೋರಿಸ್ತಾರೆ" ಎಂದು ಆ ಅಜ್ಜಿ ಆಗಾಗ ಹೇಳುತ್ತಿದ್ದ ವಿಷಯ ಅವನ ಮನಸ್ಸಿನಾಳದಲ್ಲಿ ಬೇರೂರಿ ಹೋಗಿತ್ತು.

ಅವನು ದೊಡ್ಡವನಾಗಿ ಪ್ರಾಯಕ್ಕೆ ಬಂದಾಗ ಅಜ್ಜಿ ಯಾವಾಗೋ ತೀರಿ ಹೋಗಿದ್ದಳು. ಆ ಅಜ್ಜಿ ಹೇಳಿದ ವಿಚಿತ್ರಪುರಿಯ ವಿಷಯವನ್ನು ನೋಡಿ ತೀರಬೇಕೆಂದು ಅವನಿಗೆ ತೋರಿತು. ಆ ಕಡೆಯಿಂದ ಬರುವವರ ಹತ್ತಿರವೂ, ಇನ್ನೂ ಇತರರ ಹತ್ತಿರವೂ ವಿಚಿತ್ರಪುರಿಯನ್ನು ಕುರಿತು ವಿಚಾರಿಸಿ ನೋಡಿದನು. ಹಾಗೊಂದು ಊರು ಇರುವ ಸಂಗತಿಯೇ ಯಾರಿಗೂ ತಿಳಿಯದು. ಅಂತಹ ಹೆಸರಿನ ಊರು ಇಲ್ಲವೇ ಇಲ್ಲವೆಂದೂ ಕೆಲವರು ಹೇಳಿದರು. ಆ ಗುಡ್ಡದಾಚೆಗಿರುವ ಅನೇಕ ಊರುಗಳ ಹೆಸರುಗಳಲ್ಲಿ ವಿಚಿತ್ರಪುರಿ ಇಲ್ಲವೇ ಇಲ್ಲ. "ಅದು ನಿನ್ನಜ್ಜಿಯ ಅಜ್ಜಿಯ ತೌರು ಮನೆಯ ಊರೋ ಏನೋ!" ಎಂದರು ಕೆಲವರು. ಆದರೂ ವೆಂಕಟ್ರಾಮನಿಗೆ ಆಗಾಗ ಹೇಳುತ್ತಿದ್ದ ಅಜ್ಜಿಯ ಮಾತಿನ ಮೇಲಿನ ನಂಬುಗೆ ಹೋಗಲಿಲ್ಲ.

ಒಂದು ದಿನ ವೆಂಕಟ್ರಾಮನು ಏನೋ ಕೆಲಸದ ಮೇಲೆ ದೂರದ ಒಂದು ಗ್ರಾಮಕ್ಕೆ ಹೋಗಿ, ಹಿಂದಿರುಗುವಾಗ ದಾರಿಯಲ್ಲಿ ಬ್ರಹ್ಮಾಂಡವಾದ ಗಾಳಿ ಮಳೆ ಹತ್ತಿಕೊಂಡಿತು. ಯಾವ ದಿಕ್ಕಿಗೋ ಓಡಿ ತಲೆ ತಪ್ಪಿಸಿಕೊಳ್ಳುವ ಗಡಿಬಿಡಿಯಲ್ಲಿ ದಾರಿ ತಪ್ಪಿತು. ಅಡ್ಡಾ ದಿಡ್ಡಿಯಾಗಿ ಬಿದ್ದ ಮರಗಳನ್ನು ತಪ್ಪಿಸಿಕೊಂಡು ಯಾವುದೋ ದಿಕ್ಕಿಗೆ ಸಾಗಿದನು. ಯಾವುದೋ ಒಂದು ಊರು ಹತ್ತಿಕೊಳ್ಳಲು, ದಾರಿಯಲ್ಲಿ ಸಿಕ್ಕಿದ ಒಬ್ಬನ ಹತ್ತಿರ, "ಅಯ್ಯಾ, ಇದು ಯಾವ ಊರು?" ಎಂದು ಕೇಳಿದನು.

ರಾಂಬಾಬು



"ವಿಚಿತ್ರಪುರಿ" ಎಂದ ಆ ಮನುಷ್ಯ. ಅದನ್ನು ಕೇಳಿ ವೆಂಕಟ್ರಾಮನಿಗಾದ ಸಂತೋಷ ಹೇಳಿ ತೀರದು. ಅಂತಹುದೊಂದು ಊರು ಇಲ್ಲವೆಂದು ಎಷ್ಟು ಜನರು ಹೇಳಿದರೂ, ಕದಲದ ಅವನ ನಂಬುಗೆ ಈಗ ನಿಜವಾಗಿದೆ! ವಿಚಿತ್ರಪುರಿ ಎಂಬ ಊರೊಂದು ಇದೆ. ತಾನೀಗ ಅಲ್ಲೇ ಇದ್ದೇನೆ! ಅವನಿಗಾದ ಆಶ್ಚರ್ಯಕ್ಕೂ ಆನಂದಕ್ಕೂ ಮೇರೆ ಇಲ್ಲ.

ದೊಡ್ಡ ವಿಜಯ ಸಾಧಿಸಿಕೊಂಡ ಆನಂದದಿಂದ ವೆಂಕಟ್ರಾಮನು ಬೀದಿಯಲ್ಲಿ ನಡೆಯುತ್ತಿದ್ದಾಗ ಒಂದು ಅಂಗಡಿಯಲ್ಲಿ ಬಾಳೇ ಹಣ್ಣುಗಳಿರುವುದನ್ನು ನೋಡಿದನು. ಅದನ್ನು ನೋಡಿದ ಕೂಡಲೇ ತಾನು ತುಂಬಾ ಹಸಿದಿರುವ ಸಂಗತಿ ಅವನಿಗೆ ತಿಳಿಯಿತು. ಅವನು ಅಂಗಡಿಯ ಬಳಿಗೆ ಹೋಗಿ ಒಂದು ರೂಪಾಯಿಗೆ ಬಾಳೆ ಹಣ್ಣು ಕೇಳಿ ಪಡೆದುಕೊಂಡು ತಿಂದನು. ಇನ್ನು ಈ ಊರಿನಲ್ಲಿ ಏನೇನು ವಿಶೇಷ ಗಳಿವೆಯೋ ಎಂಬ ಯೋಚನೆಯಲ್ಲಿ ಹಣ ಕೊಡಲು ಮರೆತು ಅಲ್ಲಿಂದ ಮುಂದೆ ಹೊರಟನು.

ಸ್ವಲ್ಪ ದೂರ ಹೋದ ಮೇಲೆ ತಾನು ಹಣ್ಣಿನ ಬೆಲೆಯನ್ನು ಕೊಡಲಿಲ್ಲವೆಂಬ ಸಂಗತಿ ನೆನಪಾಗಿ ಹಿಂದಿರುಗಿ ಬಂದು ಅಂಗಡಿಯವನ ಹತ್ತಿರ ಕ್ಷಮಾಪಣೆ ಹೇಳಿಕೊಂಡು, ಹಣ ತೆಗೆಯಲು ಜೇಬಿಗೆ ಕೈ ಹಾಕಿದನು.

ಆಗ ಅಂಗಡಿಯವನು, "ನೀವು ತಿಂದ ಹಣ್ಣಿನ ಬೆಲೆ ಬಂದಿವೆ ಬಿಡಿ. ನೀವು ಹೋಗಬಹುದು!" ಎಂದನು. ವೆಂಕಟ್ರಾಮನು ಆಶ್ಚರ್ಯದಿಂದ ತನ್ನ ಜೇಬಿನಲ್ಲಿರುವ ಹಣವನ್ನು ಲೆಕ್ಕಮಾಡಿ ನೋಡಿ ಕೊಂಡಾಗ, ಒಂದು ರೂಪಾಯಿ ಕಡಿಮೆಯಾಗಿದ್ದಿತು. ತನಗೆ ತಿಳಿಯದ ಹಾಗೆ ಅಂಗಡಿಯವನಿಗೆ ತಾನೇ ಹಣ ಕೊಟ್ಟಿರಬೇಕು, ಅಂದುಕೊಂಡನು ವೆಂಕಟ್ರಾಮು.

ಅಲ್ಲಿಂದ ಅವನು ಮುಂದೆ ಹೋಗುತ್ತಿರಲು, ಅವನ ಇದಿರಿನಲ್ಲಿ ಒಬ್ಬ ಮನುಷ್ಯನು, ಒಬ್ಬ ಮನುಷ್ಯನ ಒಂದು ಕಾಲನ್ನು ಹೆಗಲ ಮೇಲೆ ಹೊತ್ತು ಕೊಂಡು ಬರುವುದನ್ನು ನೋಡಿ ದಂಗಾಗಿ ನಿಂತನು.

ಆ ಮನುಷ್ಯ ಸಮೀಪಿಸಿದ ಕೂಡಲೇ ವೆಂಕಟ್ರಾಮನು, "ಇದೇನು ಕಾಲು? ಎಲ್ಲಿಗೆ ಒಯ್ಯುವಿರಿ? ಏನು ಮಾಡುತ್ತೀರಿ ಇದನ್ನು?" ಎಂದು ಕೇಳಿದನು.

"ಇದು ನನ್ನ ತಮ್ಮನ ಕಾಲು, ಹುಣ್ಣಾಗಿದೆ. ಶಸ್ತ್ರ ಚಿಕಿತ್ಸೆಗಾಗಿ ಇದನ್ನು ವೈದ್ಯರ ಹತ್ತಿರ ತೆಗೆದು ಕೊಂಡು ಹೋಗುತ್ತಿದ್ದೇನೆ" ಎಂದ ಆ ಮನುಷ್ಯ.

ವೆಂಕಟ್ರಾಮನ ಶರೀರದ ಮೇಲೆ ಹಾವು ಚೇಳು ಗಳು ಹರಿದಾಡಿದಂತಾಯಿತು. ಅವನು ಆ ಮನುಷ್ಯನ ಹಿಂದೆಯೇ ಹೋಗಿ ಸಮಾಚಾರವನ್ನು ಕಣ್ಣಾರೆ ನೋಡಿದನು.

ಅವನು ಆ ಕಾಲನ್ನು ವೈದ್ಯನ ಮುಂದೆ ಇಟ್ಟ ಮೇಲೆ, ವೈದ್ಯನು ಆ ಕಾಲಿನಲ್ಲಿದ್ದ ವ್ರಣಕ್ಕೆ ಶಸ್ತ್ರ ಚಿಕಿತ್ಸೆ ಮಾಡಿ, ಔಷದವಿಟ್ಟು ಕಟ್ಟಿದನು. ಮತ್ತೆ

ಆ ಮನುಷ್ಯ ಆ ಕಾಲನ್ನು ತೆಗೆದುಕೊಂಡು ತನ್ನ ಮನೆಗೆ ಹೋಗಿ, ಮಂಚದಲ್ಲಿ ಒಂಟಿ ಕಾಲಿನಿಂದ ಮಲಗಿದ್ದ ತಮ್ಮನಿಗೆ ಆ ಕಾಲನ್ನು ತಗಲಿಸಿದನು. ಕೂಡಲೇ ತಮ್ಮನು ಎದ್ದು ಕೋಣೆಯೊಳಗೆ ಆಚೆಗೂ ಈಚೆಗೂ ಸ್ವಲ್ಪ ನಡೆದು, ತೃಪ್ತಿಪಟ್ಟಂತೆ ಕಂಡನು.

ವೇಕಟ್ರಾಮನು ಅಂತ್ಯವಿಲ್ಲದ ಆಶ್ಚರ್ಯದಿಂದ ಅಲ್ಲಿಯ ಅಣ್ಣನೊಂದಿಗೆ ತನ್ನ ಸಂಗತಿಯನ್ನು ಹೇಳಿ ಕೊಂಡನು. ವೆಂಕಟ್ರಾಮನು ಆ ಊರಿಗೆ ಹೊಸಬ ನೆಂದು ತಿಳಿದು ಆ ಅಣ್ಣ ತಮ್ಮಂದಿರು ಆ ರಾತ್ರಿ ವೆಂಕಟ್ರಾಮನನ್ನು ತಮ್ಮಲ್ಲೇ ಅತಿಥಿಯಾಗಿರ ಬೇಕೆಂದು ಕೇಳಿಕೊಂಡರು.

ಆ ಮನೆಯಲ್ಲಿ ಅವನಿಗೆ ಆ ದಿನವು ಎಲ್ಲಾ ಸೌಕರ್ಯಗಳಿಂದ ಚೆನ್ನಾಗಿಯೇ ಸಾಗಿತು. ಊಟವಾದ ಮೇಲೆ ಮಲಗುವ ಮೊದಲು ವೆಂಕಟ್ರಾಮನು ತನಗೆ ಆತಿಥ್ಯವಿತ್ತವರೊಂದಿಗೆ ಮಾತಾಡುತ್ತಾ ಕುಳಿತನು. ಆ ಸಮಯದಲ್ಲಿ ಅಣ್ಣನ ಕಣ್ಣಿಗೆ ಏನೋ ಕಸ ಬಿದ್ದು "ಹಾಯ್" ಎಂದನು.

"ತಡೆಯಿರಿ. ನಾನು ಊದಿ ಬಿಡುತ್ತೇನೆ" ಎಂದನು ವೆಂಕಟ್ರಾಮು.

"ಅದೇನೂ ಬೇಡಬಿಡಿ" ಎಂದು ಅವನು ತನ್ನ ಕಣ್ಣು ಗುಡ್ಡನ್ನು ಬೆರಳು ತೂರಿಸಿ ಎಬ್ಬಿಸಿ ತೆಗೆದು ಅದನ್ನು ಹಾಗೆ ಹೀಗೆ ತಿರುಗಿಸಿ ನೋಡಿ ನೀರಿನಲ್ಲಿ ಮುಳುಗಿಸಿ ಒರೆಸಿ, ಮತ್ತೆ ಯಥಾ ಸ್ಥಾನದಲ್ಲಿ ಇಟ್ಟು ಕೊಂಡು, ಏನೂ ವಿಶೇಷವಾಗದಂತೆ ಸಂಭಾಷಣೆಗೆ ತೊಡಗಿದನು.

ಮರುದಿನ ಬೆಳಗಾದ ಕೂಡಲೇ ವೆಂಕಟ್ರಾಮನಿಗೆ ಆ ಊರು ಬಿಟ್ಟು ಹೋಗ ಬೇಕೆನಿಸಿತು. ಅಲ್ಲಿನವರ ನಡತೆಗಳು ಅವನಿಗೆ ಏನೋ ಜ್ವರಗುದ್ದುವ ಹಾಗಿತ್ತು. ಆದರೆ ಆ ಅಣ್ಣ ತಮ್ಮಂದಿರು ಕೆಲವು ದಿನ ಇರುವಂತೆ ಒತ್ತಾಯ ಪಡಿಸಿದರು.

"ಇಲ್ಲ. ನನಗೆ ಹೋಗಲೇಬೇಕು. ಅವಸರದ ಕೆಲಸವಿದೆ!" ಎಂದು ಹೇಳಿ ವೆಂಕಟ್ರಾಮನು ಹೊರಟು ಹೋಗಲು ದಾರಿಯನ್ನೋ ದಿಕ್ಕನ್ನೋ ಅವರನ್ನೇ ಕೇಳಬೇಕೆಂದುಕೊಂಡು, ಬಾಯಿ ತೆರೆಯುವುದರೊಳಗೆ, "ಸರಿ. ಸರಿ. ಈಗಲೇ ಹೋಗಿ ಬಿಡಿ!" ಎಂದು ಇಬ್ಬರೂ ಒಂದೇ ಬಾಯಿಗೆ ಕೂಗಿ ಹೇಳಿದರು. ವೆಂಕಟ್ರಾಮನಿಗೆ ತಲೆ ಗಿರ್ರನೆ ಸುತ್ತಿದ ಹಾಗಾಯಿತು. ಆಕಾಶವೆಲ್ಲಾ ತಿರುಗಿತು. ಬೋದ ತಪ್ಪಿತು. ಮತ್ತೊಂದು ನಿಮಿಷದಲ್ಲಿ ಅವನ ಪರಿಸ್ಥಿತಿ ಸರಿಯಾಯಿತು. ಆಗ ಅವನು ತನ್ನ ಮನೆಯ ಬಾಗಿಲ ಮುಂದೇ ನಿಂತಿದ್ದನು. ಅವನು ಎಷ್ಟು ತಲೆ ಕೆರೆದು ಆಲೋಚನೆ ಮಾಡಿಕೊಂಡರೂ ತನ್ನ ಅನುಭವ ನಿಜವೋ ಭ್ರಮೆಯೋ ಎಂದು ಅವನಿಗೆ ಗೊತ್ತಾಗಲಿಲ್ಲ.






ಒಂದು ಕಾಲದಲ್ಲಿ ಮಹಾರಾಜಪುರವು ಜಮೀನ್ದಾರೀ ಸಂಸ್ಥಾನವಾಗಿತ್ತು. ಚಿದಂಬರನಾಥರು ಅಲ್ಲಿಯ ಜಮೀನ್ದಾರರಾಗಿದ್ದಾಗ, ಅವರ ಬಳಿಗೆ ಇಬ್ಬರು ಯುವಕರು ಬಂದು ಜೀವನೋಪಾಯಕ್ಕೆ ದಾರಿ ಕೊಡಿಸಬೇಕೆಂದು ಕೇಳಿದರು. ಚಿದಂಬರನಾಥರ ಮಿತ್ರರಿಂದ ಒಂದು ಶಿಫಾರಸು ಪತ್ರ ಕೂಡಾ ತಂದಿದ್ದರು. ಒಬ್ಬನ ಹೆಸರು ಭರದ್ವಾಜ, ಇನ್ನೊಬ್ಬನ ಹೆಸರು ಗೋಪಾಲ.

ಚಿದಂಬರನಾಥರು ಮಿತ್ರನ ಶಿಫಾರಸು ಪತ್ರವನ್ನು ನೋಡಿ, ಅವರನ್ನು ಮಾತಾಡಿಸಿ, ಸ್ವಲ್ಪ ಹೊತ್ತು ಆಲೋಚನೆ ಮಾಡಿ "ನೋಡಿರಪ್ಪಾ, ಪ್ರಸ್ತುತ ನನ್ನ ದಿವಾಣದಲ್ಲಿ ಖಾಲೀ ಜಾಗ ಇಲ್ಲ. ಆದರೆ ನಿಮ್ಮನ್ನು ಕಳುಹಿಸಿದವನು ನನ್ನ ಮಿತ್ರನಾದುದರಿಂದ ನಾನು ನಿಮಗೆ ಒಂದೊಂದು ಗ್ರಾಮದಲ್ಲಿ ಎರಡೆರಡು ಎಕರೆ ಬಂಜರು ನೆಲವನ್ನು ಕೊಡುತ್ತೇನೆ. ಅಲ್ಲಿ ಕಷ್ಟಕೃತ ಮಾಡಲಿಕ್ಕೆ ಸಾಕಾಗುವಷ್ಟು ಹಣವನ್ನೂ ಕೊಡುತ್ತೇನೆ. ಒಂದು ವರ್ಷ ಆದ ಮೇಲೆ ಆ ಹಣ ವಾಪಾಸುಕೊಡಲು ಶುರು ಮಾಡಿದರೆ ಸಾಕು. ಆ ಸ್ಥಳದಲ್ಲಿ ನೀವು ನಿಮ್ಮ ಸಾಮರ್ಥ್ಯದಿಂದ ಒಳ್ಳೆಯ ಜೀವನ ನಡೆಸಬಹುದು" ಎಂದರು. ಯುವಕರೂ ಒಪ್ಪಿದರು. ಚುಕ್ಕೀ ಹಳ್ಳಿಗೆ ಭರದ್ವಾಜನನ್ನೂ, ನಂದಿವಳ್ಳಿಗೆ ಗೋಪಾಲನನ್ನೂ, ಹೋಗಲು ಹೇಳಿ, ಅಲ್ಲಿಯ ಗ್ರಾಮಾಧಿಕಾರಿಗಳಿಗೆ ಒಂದು ಕಾಗದವನ್ನೂ ಬರೆದುಕೊಟ್ಟರು ಚಿದಂಬರನಾಥರು. ಭರದ್ವಾಜನು ಜಮೀನ್ದಾರರು ಕೊಟ್ಟ ಕಾಗದವನ್ನು ತೆಗೆದುಕೊಂಡು ಹೋಗಿ, ಚುಕ್ಕೀ ಹಳ್ಳಿಯ ಅಧಿಕಾರಿಗೆ ಕೊಟ್ಟು ಎರಡು ಎಕರೆ ಬಂಜರು ನೆಲವನ್ನು ಪಡೆದುಕೊಂಡನು. ಆ ಸ್ಥಳದಲ್ಲಿ ಹುಣಸೇ ಮರಗಳೂ, ಹೊನ್ನೇ ಮರಗಳೂ ಎರಡು ಮೂರಿದ್ದುವು. ಜಮೀನ್ದಾರರು ಕೊಟ್ಟ ಹಣದಿಂದ ಕೂಲಿಯಾಳುಗಳನ್ನು ಇಟ್ಟುಕೊಂಡು, ಸಾಗುವಳಿಗೆ ತಕ್ಕ ಹಾಗೆ ಹಸನು ಮಾಡಿದರೂ, ಒಂದು ವರ್ಷದಲ್ಲಿ ತನ್ನ ಕಷ್ಟದ ಫಲವನ್ನು ಪಡೆಯುತೊಡುಗುವೆನೆಂಬ ನಂಬುಗೆ ಉಂಟಾಗಲಿಲ್ಲ. ಪಡೆದ ಹಣವನ್ನು ಹಿಂದಿರುಗಿಸುವುದು ಹೇಗೆ ?

ಕೂಲಿಯಾಳುಗಳೂ, ಗ್ರಾಮದ ಜನರೂ ಹೇಳಿದ ಮಾತಿನಿಂದ ಆ ನೆಲದ ಮಣ್ಣು ಇಟ್ಟಿಗೆ ತಯಾರಿಸಲು ಯೋಗ್ಯವಿರುವುದೆಂದು ಗೊತ್ತಾಯಿತು, ಆದುದರಿಂದ

ಆರ್. ಎಸ್. ನಾರಾಯಣಮೂರ್ತಿ

ಭರದ್ವಾಜನು ಇಟ್ಟಿಗೆಯ ಕೆಲಸ ಮಾಡುವವರನ್ನು ಕರೆಯಿಸಿ, ಅವರಿಂದ ಇಟ್ಟಿಗೆ ತಯಾರಿಸುವ ಕೆಲಸಕ್ಕೆ ತೊಡಗಿದನು. ಕೆಲಸಕ್ಕೆ ಬಾರದ ಮರಗಳನ್ನು ಕಡಿಸಿ ಒಲೆಗೂಡು ತಯಾರಿಸಿ ಇಟ್ಟಿಗೆಗಳನ್ನು ಸುಡಿಸಿ, ಅದನ್ನೇ ದೊಡ್ಡ ವೃತ್ತಿಯಾಗಿ ಮಾಡಿಕೊಂಡನು. ನಗರಗಳಲ್ಲಿ ಅವನ ಇಟ್ಟಿಗೆಗಳಿಗೆ ಒಳ್ಳೆಯ ಬೆಲೆ ಬಂದಿತು. ಒಂದು ವರ್ಷ ತುಂಬುವಷ್ಟರಲ್ಲಿ ಇಟ್ಟಿಗೆಯ ವ್ಯಾಪಾರದಲ್ಲಿ ಜಮೀನ್ದಾರರು ಕೊಟ್ಟ ಹಣಕ್ಕಿಂತ ಮೇಲೆಯೇ ಸೇರಿತು. ಆದುದರಿಂದ ಜಮೀನ್ದಾರರು ಸಾಲವಾಗಿ ಕೊಟ್ಟ ಹಣವನ್ನು ಹಿಂದಿರುಗಿಸಿ ಬಿಟ್ಟನು.

"ನೀನು ಹೇಗೆ ಸಂಪಾದಿಸಿದಿ?" ಎಂದು ಚಿದಂಬರ ನಾಥರು ವಿಚಾರಿಸಿದರು. ಅವನು ತಾನು ಅನೇಕ ಊರುಗಳಿಗೆ ದೊಡ್ಡ ಇಟ್ಟಿಗೆ ವ್ಯಾಪಾರಿಯಾಗಿ ಪರಿಚಿತನಾದ ಸಮಾಚಾರವನ್ನು ಹೇಳಿದನು.

"ಚೆನ್ನಾಗಿದೆ. ನನ್ನ ಸಾಲ ನೀನು ಕೊಡಬೇಕಾಗಿಲ್ಲ. ಅದನ್ನು ಮೂಲಧನವಾಗಿ ಮಾಡಿಕೊಂಡು ಇನ್ನೂ ಅಭಿವೃದ್ಧಿಗೆ ಬಾ" ಎಂದು ಅವನು ಕೊಟ್ಟ ಹಣವನ್ನು ಅವನಿಗೇ ಕೊಟ್ಟು ಕಳುಹಿಸಿದರು ಜಮೀನ್ದಾರರು.

ಭರದ್ವಾಜನ ಹಾಗೆಯೇ ಗೋಪಾಲನೂ ನದಿ ವಳ್ಳಿಯಲ್ಲಿ ಗ್ರಾಮಾಧಿಕಾರಿಯಿಂದ ಎರಡು ಎಕರೆ ಬಂಜರು ನೆಲವನ್ನು ಪಡೆದುಕೊಂಡು, ಜಮೀನ್ದಾರರು ಕೊಟ್ಟ ಹಣದಿಂದ ಕೆಲಸ ಮಾಡಿಸಿ ಸಾಗುವಳಿ ಮಾಡಿಸಿದನು. ಸಮಯಕ್ಕೆ ನೀರು ಹಾಯಿಸಲಾಗದೆ, ಪೈರುಗಳೆಲ್ಲ ಒಣಗಿ ಹೋದುವು. ಜಮೀನ್ದಾರರು ಸಾಲವಾಗಿ ಕೊಟ್ಟ ಹಣವಷ್ಟೂ ವ್ಯರ್ಥವಾಯಿತು.

ಗೋಪಾಲನು ಬಾಡಿದ ಮುಖದಿಂದ ಜಮೀನ್ದಾರರ ಬಳಿಗೆ ಬಂದು ಹಣವೆಲ್ಲಾ ವ್ಯರ್ಥವಾಗಿ ಹೋಯಿತೆಂದೂ, ತಾನು ಬೇರೇನಾದರೂ ಮಾಡಿ ಸಂಪಾದಿಸಲು ಸಾಧ್ಯವಾದಾಗ ತಮ್ಮ ಸಾಲವನ್ನು ತೀರಿಸುವೆನೆಂದೂ ಹೇಳಿದನು. ತನಗೆ ಭೂಮಿ ಸರಿಬಾರದೆಂದೂ, ಬೇರೇನಾದರೂ ದಾರಿ ತೋರಿಸಿದರೆ ಒಳ್ಳೆಯದೆಂದೂ ಪ್ರಾರ್ಥಿಸಿಕೊಂಡನು.

ಜಮೀನ್ದಾರರು ಗೋಪಾಲನಿಗೆ ತನ್ನ ದಿವಾಣದಲ್ಲಿ ಒಂದು ಉದ್ಯೋಗವನ್ನು ಕೊಟ್ಟು, ಅವರಿಬ್ಬರನ್ನು ಕಳುಹಿಸಿದ ತಮ್ಮ ಮಿತ್ರನಿಗೆ ಹೀಗೆ ಕಾಗದ ಬರೆದರು : "ನೀವು ಕಳುಹಿಸಿದ ಯುವಕರಿಬ್ಬರೂ ಚೆನ್ನಾಗಿ ಓದಿಕೊಂಡವರಾದರೂ ಅವರಲ್ಲಿ ಭರದ್ವಾಜನೆಂಬವನು ತನ್ನ ಜೀವನದ ದಾರಿಯನ್ನು ತಾನಾಗಿ ಸೃಷ್ಟಿಸಿಕೊಳ್ಳಬಲ್ಲ ಸಮರ್ಥನು. ಎರಡನೆಯವನಾದ ಗೋಪಾಲನಿಗೆ ಅಂತಹ ಸಾಮರ್ಥ್ಯವಿಲ್ಲ. ಅವನು ಒಬ್ಬರ ಕೈಕೆಳಗೆ ಉದ್ಯೋಗ ಮಾಡಲಿಕ್ಕೆ ಹೊರತು. ಸ್ವತಃ ಬದಕಲು ಸಾಮರ್ಥ್ಯವಿಲ್ಲದವನು. ಅವನಿಗೆ ನನ್ನ ದಿವಾಣದಲ್ಲೇ ಉದ್ಯೋಗ ಕೊಟ್ಟಿದ್ದೇನೆ".






## ೧೨

[ಕುಂಭಾಂಡನು ಆಟವಿಕರೊಂದಿಗೆ ತಮ್ಮನ್ನು ಹುಡುಕುವುದನ್ನು ತಿಳಿದು, ಸಮರಸೇನನು ತನ್ನ ಸೈನಿಕರೊಂದಿಗೆ ಗುಹೆಯೊಳಗೆ ಅಡಗಿಕೊಂಡನು. ಅದಲ್ಲಿಯೂ ಅಪಾಯವನ್ನು ಶಂಕಿಸಿ ಸೈನಿಕರನ್ನು ಮರಗಳ ಮೇಲಿರುವಂತೆ ಕಳುಹಿಸಿದನು. ಗುಹೆಯ ಹಿಂದೆ ಏನೋ ಶಬ್ದ ಕೇಳಿ ಬರಲು, ಸಮರಸೇನನು ಪರಡುತ್ತಾ ಹೋಗಿ ಒಂದು ದ್ವಾರದ ಮೂಲಕ ಹೊರಬಿದ್ದನು. ಕೂಡಲೇ ಇಬ್ಬರು ಬಲಿಷ್ಠರು ಅವನನ್ನು ಹಿಡಿದುಕೊಂಡರು.]

ಸ್ವಲ್ಪವೂ ಇದಿರು ನೋಡದಂತೆ ಒಮ್ಮೆಗೇ ಇಬ್ಬರು ಮಹಾ ಬಲಿಷ್ಠರು ತನ್ನ ಮೇಲೆ ಬಿದ್ದು ಕೈಗಳನ್ನು ಹಿಂದಕ್ಕೆ ಬಿಗಿದುಕಟ್ಟಿದುದರಿಂದ ಸಮರಸೇನನು ತಬ್ಬಿಬ್ಬಾಗಿ ಹೋದನು. ಆತ್ಮರಕ್ಷಣೆಗೆ ಕೂಡಾ ಅವಕಾಶವಿಲ್ಲದೆ ಹೋಯಿತು. ಅವನ ಬಾಯಿಯಿಂದ ಯಾವ ಶಬ್ದವೂ ಹೊರಡಲಿಲ್ಲ. ಇನ್ನಷ್ಟು ಭೀತಿ ಹುಟ್ಟುವ ಹಾಗೆ ಗುಹೆಯ ಮುಂಗಡೆಯಿಂದ ಸಿಂಹದ ಗರ್ಜನೆ ಬೇರೆ ಕೇಳ ತೊಡಗಿತು. ತನ್ನ ಮರಿಗಳನ್ನು ನೆನೆದುಕೊಂಡು ತಾಯಿ ಸಿಂಹವೋ ತಂದೆ ಸಿಂಹವೋ ಬಂದಿರಬಹುದು, ಆ ಸಿಂಹ ಗರ್ಜನೆ ಸಮೀಪದಲ್ಲಿ ಕೇಳಿದ ಕೂಡಲೇ ಸಮರಸೇನನನ್ನು ಬಂಧಿಸಿದ ಬಂಟರು ಒಮ್ಮೆಗೇ ಅವನನ್ನು ಯಾವುದೋ ಮೂಟೆಯ ಹಾಗೆ ಹೆಗಲ ಮೇಲೆ ಹಾಕಿಕೊಂಡು ಅಲ್ಲಿಂದ ಓಡಲು ತೊಡಗಿದರು. ಒಬ್ಬನ ಮೇಲೆಯೇ ಸಮರಸೇನನ ಭಾರ ಬೀಳದಂತೆ ಇನ್ನೊಬ್ಬನೂ ಆಗಾಗ ಕೈಗೊಡುತ್ತಾ ಜತೆ ಬಿಡದೆ ಓಡುತ್ತಿದ್ದನು.

ಸಮರಸೇನನಿಂದ ಏನು ಮಾಡಲಿಕ್ಕೂ ಸಾಧ್ಯವಿರಲಿಲ್ಲ. ಉರುಳಾಡುವುದರಿಂದ ಇನ್ನಷ್ಟು ನೋವೇ ಹೊರತು ಪ್ರಯೋಜನವಿಲ್ಲವೆಂದುಕೊಂಡು, ಬಲ ಪ್ರದರ್ಶನಕ್ಕೆ ಹೋಗದೆ ಸುಮ್ಮನಿದ್ದನು. ಆದರೆ



ಬೆಳುದಿಂಗಳ ರಾತ್ರಿಯಾದುದರಿಂದ ಸುತ್ತಮುತ್ತಣ ಪ್ರಾಂತಗಳನ್ನು ಪರೀಕ್ಷಿಸಿ ನೋಡಿಕೊಂಡೇ ಇದ್ದನು. ಅವರು ಈಗ ಸಾಗುತ್ತಿರುವುದು ಒಂದು ಬೆಟ್ಟದ ಕಣಿವೆ ಪ್ರದೇಶ. ಅವನನ್ನು ಬಂಧಿಸಿ ಹೊತ್ತುಕೊಂಡವರಿಬ್ಬರೂ ಬೆಟ್ಟದ ಮೇಲಿನಿಂದ ಕೆಳ ಭಾಗಕ್ಕೆ ಇಳಿಯುತ್ತಾ ಓಡುತ್ತಿದ್ದರು. ದೂರದಲ್ಲೆಲ್ಲಿಯೋ ಮಿಣುಕು ಮಿಣುಕಾದ ದೀಪಗಳು ಆಗಾಗ ಕಾಣುತ್ತಿದ್ದುವು, ಆ ಕಡೆಗೇ ತಾನು ಹೋಗಲ್ಪಡುತ್ತಿದ್ದೇನೆಂದು ಸಮರಸೇನನಿಗೆ ತಿಳಿಯಿತು. ಅದು ಕುಂಭಾಂಡನ ಪ್ರದೇಶವಾಗಿರಬಹುದೇ? ಇವರು ಅವನ ಕಡೆಯುವರಾಗಿರಬಹುದೆ ?

"ಯಾರು ನೀವು ? ನನ್ನನ್ನು ಏಕೆ ಬಂಧಿಸಿ ಒಯ್ಯುವಿರಿ? " ಎಂದು ಸಮರಸೇನನು ಬಾಯಿ ಬಿಟ್ಟು ಕೇಳಿದನು.

ಅವನ ಬಾಯಿಯಿಂದ ಹೊರಟ ಪ್ರಶ್ನೆಯನ್ನು ಕೇಳಿ, ಅವನನ್ನು ಹೊತ್ತುಕೊಂಡು ಹೋಗುವವರು ಮುಖ ಮುಖ ನೋಡಿಕೊಂಡರೇ ಹೊರತು, ಏನೂ ಹೇಳದೆ ಮೌನವಾಗಿಯೇ ನಡೆಯುತ್ತಿದ್ದರು. ಸಮರಸೇನನು ಸ್ವಲ್ಪ ಹೊತ್ತು ಸುಮ್ಮನಿದ್ದು ಪುನಃ ಅದೇ ಪ್ರಶ್ನೆಯನ್ನು ಮಾಡಿದನು. ಅದರೊಂದಿಗೆ, "ನೀವು ಮಾತಾಡಿಕೊಂಡ ಭಾಷೆ ನನ್ನ ಕಿವಿಗೆ ಬಿದ್ದಿತ್ತು. ಆ ಭಾಷೆಯಲ್ಲಿಯೇ ಕೇಳಿದ್ದೇನೆ. ನನ್ನ ಮಾತು ನಿಮಗೆ ಅರ್ಥವಾಗದೆ ಇರಲಿಕ್ಕಿಲ್ಲ." ಎಂದನು.

ಇಷ್ಟು ಹೇಳಿದ ಮೇಲೆ ಇಬ್ಬರಲ್ಲಿ ಒಬ್ಬನು, "ನೀನು ಕೇಳಿದ ಪ್ರಶ್ನೆಗಳನ್ನು ನಮ್ಮ ನಾಯಕನನ್ನೇ ಕೇಳು. ಆತನೇ ಉತ್ತರ ಹೇಳುತ್ತಾನೆ" ಎಂದನು.

ಇನ್ನು ಇವರನ್ನು ಪ್ರಶ್ನಿಸಿ ಪ್ರಯೋಜನವಿಲ್ಲವೆಂದು ಸಮರಸೇನನಿಗೆ ತಿಳಿಯಿತು. ಸ್ವಲ್ಪ ಹೊತ್ತಿಗೆ ಅವರು ಸಮರಸೇನನನ್ನು ಹೊತ್ತುಕೊಂಡು ಒಂದು ಕಡೆಯಲ್ಲಿ ಕೆಳಗಿಳಿಸಿ, ಕೈಗಳಿಗೂ ಕಾಲುಗಳಿಗೂ ಕಟ್ಟಿದ ಕಟ್ಟುಗಳನ್ನು ಬಿಚ್ಚಿಬಿಟ್ಟರು, ತರುವಾಯ ಸಮರಸೇನನ ಕೈಗಳನ್ನು ಗಟ್ಟಿಯಾಗಿ ಹಿಡಿದು ಎಳೆಯುತ್ತಾ ಮುಂದೆ ನಡೆಯ ತೊಡಗಿದರು.

ಹೀಗೆ ಸ್ವಲ್ಪದೂರ ಹೋದಾಗ ದೀಪಗಳೆಲ್ಲ ಹತ್ತಿರವಾದುವು. ದಾರಿಯಲ್ಲಿ ಮರದ ಮೇಲೆ ಕುಳಿತಿದ್ದ ಕಾವಲಿಗನೊಬ್ಬನು. "ನಮ್ಮವರಿಬ್ಬರು ಯಾವನನ್ನೋ ಬಂಧಿಸಿ ತರುತ್ತಿದ್ದಾರೆ. ದಾರಿ ಬಿಡ್ರೋಯ್" ಎಂದು ಕೊರಳೆತ್ತಿ ಕೂಗಿ ಹೇಳಿದನು. ಆ ಕೂಗಿಗೆ ಉತ್ತರವೋ ಎಂಬಂತೆ ಮತ್ತೆ ಕೆಲವು ಕೂಗುಗಳು ಕೇಳಿಬಂದುವು. ಈ ಬಗೆಯ ಕ್ರಮವನ್ನು ನೋಡಿ ಸಮರಸೇನನಿಗೆ ಆಶ್ಚರ್ಯದೊಂದಿಗೆ ಭಯವೂ ಬೆರೆಯಿತು, ತನ್ನ ಸಹಾಯಕರಾದ ಸೈನಿಕರಿಗೂ ತನ್ನ ಗತಿ ತಿಳಿಯದೆ ಹೋಯಿತಲ್ಲಾ ಎಂದು ಮಿಡುಕಿಕೊಂಡನು. ಇವರಾಗಿಯೇ ತನ್ನ ಬಂಧನವನ್ನು ಬಿಡಿಸಿದುದನ್ನು ನೋಡಿದರೆ, ತಾನು ತಪ್ಪಿಸಿಕೊಳ್ಳಲು ನೋಡುವುದು ಬುದ್ಧಿಗೇಡಿತನವಾದೀತೆಂದೇ ತೋರಿತು.

ಸ್ವಲ್ಪ ಹೊತ್ತಿಗೆ ಅವರಿಬ್ಬರೂ ಸಮರಸೇನನನ್ನು ಒಂದು ಮನೆಯ ಮುಂದೆ ನಿಲ್ಲಿಸಿ ಬಾಗಿಲು ತಟ್ಟಿದರು. ಕೂಡಲೇ ಒಬ್ಬನು ಬಾಗಿಲು ತೆರೆದು ಸಮರ ಸೇನನನ್ನು ಒಳಗೆ ಕರೆದುಕೊಂಡು ಹೋಗಿ, ಮತ್ತೆ ಕಾಲುಗಳನ್ನೂ ಕೈಗಳನ್ನೂ ಹಗ್ಗದಿಂದ ಕಟ್ಟಿ, "ಈ ರಾತ್ರಿ ಇದೇ ನಿನ್ನ ಮಲಗುವ ಕೋಣೆ. ಬೆಳಗಾದ ಮೇಲೆ ನಿನ್ನ ಪಾಲಿಗೆ ಭಾರೀ ಮೊಸಳೆ ಹಬ್ಬ ಬರಲಿದೆ," ಎಂದು ಹೇಳಿ ಬಾಗಿಲು ಮುಚ್ಚಿ ಮೂವರೂ ಹೊರಟು ಹೋದರು.

ಮಹಾವೀರನಾದ ಸಮರಸೇನನು ಮಹಾ ಯಾತನೆ ಯನ್ನು ಅನುಭವಿಸುತ್ತ ಆ ರಾತ್ರಿಯನ್ನು ಆ ಕತ್ತಲೆ ಕೋಣೆಯಲ್ಲಿ ಕಳೆದನು. ಚಿಂತೆಯಿಂದ ನಿದ್ದೆಯೇ ಬರಲಿಲ್ಲ. ಬೆಳಗಾಗುವ ಸೂಚನೆಯಂತೆ ಕೋಳಿಗಳ ಕೂಗು ಕೇಳಿಬಂದಿತು. ಆ ಮೇಲೆ ಗುಡಿಯ ಗಂಟೆ ಯಂತೆ ಘಂಟಾನಾದವು ಕೇಳಿಸಿತು, ನೋಡ ನೋಡು ತ್ತಿರಲು ಹೊರಗಿನಿಂದ ಅಡಿಗಳ ಸಪ್ಪಳವು ಕೇಳಿ ಬಂದಿತು. ಕಿರ್ರೆಂದು ಕೋಣೆಯ ಬಾಗಿಲು ತೆರೆದು ಕೊಂಡಿತು. ಸಮರಸೇನನು ತಲೆಯೆತ್ತಿ ನೋಡಿದನು. ಬಿಚ್ಚು ಗತ್ತಿಯನ್ನು ಧರಿಸಿದ್ದ ಇಬ್ಬರು ಹೊಸ ಕಟ್ಟಾಳು ಗಳು, ತೀಕ್ಷ್ಣ ದೃಷ್ಟಿಯಿಂದ ನೋಡುತ್ತ ಸಮರಸೇನನ ಬಳಿಗೆ ಬಂದು ತಮ್ಮೊಳಗೆ ಏನೋ ಸನ್ನೆಮಾಡಿ ಕೊಂಡರು. ಆಗ ಸಮರಸೇನನು, "ಆ ಗಂಟೆಯ ಶಬ್ದ ಯಾವ ದೇವರ ಗುಡಿಯದು?" ಎಂದು ಕೇಳಿದನು.

ಅದನ್ನು ಕೇಳಿ ಒಬ್ಬನು ನಗುತ್ತ, "ಅದು ಗುಡಿಯ ಗಂಟೆಯಲ್ಲ; ನಿನ್ನ ಸಾವಿನ ಸೂಚನೆಯ ಗಂಟೆ! ನಮ್ಮ ನಾಯಕ ವ್ಯಾಘ್ರದತ್ತನು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡು. ಇಲ್ಲದೇ ಹೋದರೆ ನಿನ್ನ ನೂರು ವರ್ಷ ಇವತ್ತಿಗೇ ಪೂರ್ತಿ ಯಾಗುತ್ತದೆ! ಜಾಗ್ರತೆ!" ಎಂದನು.

"ನಾಯಕ ವ್ಯಾಘ್ರದತ್ತ! ಯಾರವನು? ಕುಂಭಾಂಡನ ಸಂಬಂಧದವನಂತೆ ಕಾಣುವುದಿಲ್ಲ. ಅವನಿಗೆ ತನ್ನಿಂದ ತಿಳಿಯ ತಕ್ಕ ರಹಸ್ಯವೇ ನಿರಬಹುದು? ಇಂತಹ ಪ್ರಶ್ನೆಗಳಿಗೆ ಉತ್ತರ





ವಾಗಿಲ್ಲವೇ ? ವ್ಯಾಘ್ರದತ್ತನ ಬಳಿಗೆ ! ಅಲ್ಲಿ ತಲೆ ಸರಿಯಾಗಿಟ್ಟುಕೊಂಡು ಪ್ರವರ್ತಿಸು. ತಪ್ಪಿದರೆ ತಲೆ ಹಾರಿಹೋದೀತು !" ಎಂದನು ಕಣ್ಣು ತಿರುಗಿಸುತ್ತ.

ಅವರು ಸ್ವಲ್ಪ ದೂರ ನಡೆದು ಒಂದು ಭವನ ವನ್ನು ಪ್ರವೇಶಿಸಿದರು. ಅಲ್ಲಿ ಬಗೆಬಗೆಯ ಆಯುಧ ಗಳನ್ನು ಧರಿಸಿದ ಅನೇಕಮಂದಿ ಸೈನಿಕರು, ಗಜಿ ಬಿಜಿಯಾಗಿ ಮಾತಾಡಿಕೊಂಡಿರುವುದು ಕೇಳಿಸಿತು. ಯಾರೂ ಬರುವವರನ್ನು ಲಕ್ಷ್ಯಮಾಡಿದಂತೆ ಕಾಣಲಿಲ್ಲ.

ಹಠಾತ್ತಾಗಿ ದೊಡ್ಡದೊಂದು ಬಾಗಿಲು ತೆರೆಯಲ್ಪಟ್ಟಿತು, ಇದಿರಿನಲ್ಲಿ ಎತ್ತರವಾದ ಪೀಠದ ಮೇಲೆ ಠೀವಿಯಿಂದ ಒಬ್ಬನು ಕುಳಿತುಕೊಂಡಿದ್ದನು. ಅವನೇ ವ್ಯಾಘ್ರದತ್ತನಿರಬೇಕೆಂದು ಸಮರಸೇನನು ಊಹಿಸಿಕೊಂಡನು. ಆಗ ಕಿವಿಯೊಡೆಯುವಂತಹ ಅವನ ಗಂಭೀರ ಧ್ವನಿ ಹೊರಟಿತು.

"ಸಮರಸೇನಾ ! ನಾನೇ ವ್ಯಾಘ್ರದತ್ತ. ಬಾ ! ನಿನಗೆ ವ್ಯಾಘ್ರ ಮಂಡಲದ ಪರವಾಗಿ ಸುಸ್ವಾಗತ ದೊಂದಿಗೆ ಅಭಿನಂದನೆ ಹೇಳುತ್ತೇನೆ. ಬಹುಶಃ ನಿನ್ನ ಪೂರ್ವಿಕರೂ ನನ್ನ ಪೂರ್ವಿಕರೂ ಕುಂಡಲಿನೀ ದ್ವೀಪದಲ್ಲಿ ಒಂದೇ ಪಟ್ಟಣವಾಸಿಗಳಾಗಿದ್ದಿರಬೇಕು. ಇಲ್ಲಿ, ಈ ಮಂತ್ರ ದ್ವೀಪದಲ್ಲಿ ಅವರ ಸಂತಾನ ಗಳಾದ ನಾವಿಬ್ಬರೂ ಹೀಗೆ ಹಠಾತ್ತಾಗಿ ಸಂಧಿಸು ವಂತಾಗಿದೆ. ನಿನಗೆ ಆಶ್ಚರ್ಯವಾಗುವುದಿಲ್ಲವೇನು?"

ವ್ಯಾಘ್ರದತ್ತನ ಮಾತಿಗೂ ಅಲ್ಲಿನ ಪರಿಸ್ಥಿತಿಗೂ ಸಂಬಂಧವೇನೂ ಕಾಣಲಿಲ್ಲ. ಅಭಿನಂದಿಸುವವನನ್ನು ಕುಳ್ಳಿರಿಸಲು ಒಂದು ಆಸನವೂ ಅಲ್ಲಿಲ್ಲ. ತಾನು ಬಂಧಿಸಲ್ಪಟ್ಟ ಕ್ಷಣದಿಂದ ನಡೆಯುವ ಪ್ರತಿ ಸಂಘಟನೆಯೂ ಆಶ್ಚರ್ಯಕರವಾಗಿಯೇ ಇತ್ತು. ಕುಂಡಲಿನೀ ದ್ವೀಪದ ಹೆಸರನ್ನು ಹೇಳಿ, ತಮ್ಮ ಪೂರ್ವಿಕರನ್ನು ನೆನಪಿಗೆತರುವ ವ್ಯಾಘ್ರದತ್ತನ ಧೋರಣೆ ಕೂಡಾ ಆಶ್ಚರ್ಯಕರವಾಗಿದ್ದಿತು. ಸಮರ ಸೇನನು ಧೈರ್ಯದಿಂದ ಮಾತಾಡಲು ತೊಡಗಿದನು:

ತಿಳಿಯಲು ಸಮರಸೇನನಿಗೆ ಸಾಧ್ಯವಾಗಲಿಲ್ಲ. ತುಂಬ ಕ್ರೂರರಂತೆ ಕಾಣುವ ವ್ಯಾಘ್ರದತ್ತನ ಅನುಚರರನ್ನು ನೋಡಿದರೆ ಇವರಿಂದ ಯಾವ ಸುದ್ದಿಯೂ ಗೊತ್ತಾಗುವುದಿಲ್ಲವೆಂದೇ ಕಾಣುತ್ತದೆ. ಅನಾಗರಿಕವಾದ ಈ ಅರಣ್ಯ ದ್ವೀಪದಲ್ಲಿ ವ್ಯಾಘ್ರದತ್ತನ ಅಧಿಕಾರ ಪ್ರದೇಶವು ಒಂದು ಕ್ರಮದಲ್ಲಿ ನಡೆಯುವ ಹಾಗಿದೆ. ಧೂಮಕೇತುವಿನ ದುಃಶಕುನವನ್ನು ಧಿಕ್ಕರಿಸಿ ಹೊರಟ ತನ್ನನ್ನು ಕುಂಡಲಿನೀದೇವಿಯೇ ಕಾಪಾಡ ಬೇಕು ! ಹೀಗಂದುಕೊಂಡು ಸಮರಸೇನನು ಕಣ್ಣು ಮುಚ್ಚಿ ಧ್ಯಾನಿಸಿಕೊಂಡನು.

ಬಂದವರು ಮೌನವಾಗಿಯೇ ಸಮರಸೇನನ ಕೈ ಕಾಲುಗಳ ಕಟ್ಟುಗಳನ್ನು ಬಿಚ್ಚಿ ಆ ಕೋಣೆಯಿಂದ ಹೊರಗೆ ಕರೆದುಕೊಂಡು ನಡೆದರು. "ಎಲ್ಲಿಗೆ ತೆಗೆದುಕೊಂಡು ಹೋಗುವಿರೆಂಬುದನ್ನಾದರೂ ಹೇಳುವಿರಾ ?" ಎಂದು ಕೇಳಿದನು ಸಮರಸೇನ. "ಯುಮಧರ್ಮ ರಾಜನ ಬಳಿಗೆ ! ಅರ್ಥ

"ವ್ಯಾಘ್ರದತ್ತಾ, ನನಗೆ ಪ್ರತಿಯೊಂದೂ ಏನೂ ತಿಳಿಯದ ಸಂಗತಿಯಾಗಿ ಆಶ್ಚರ್ಯವಾಗಿಯೇ ಕಾಣುತ್ತದೆ. ನಾನು ಇಲ್ಲಿ ಯಾರಿಗೂ ಯಾವ ಕೇಡೂ ಮಾಡಿದವನಲ್ಲ. ನಿನ್ನ ಕಡೆಯವರು ನನ್ನನ್ನು ಹೀಗೆ ಬಂಧಿಸಿ ತರಲು ಕಾರಣವೇನು ? ಅಸಲು ನೀವು ಈ ಭಯಂಕರ ದ್ವೀಪಕ್ಕೆ ಯಾವಾಗ ಬಂದಿರಿ ? ಏಕೆ ಬಂದಿರಿ ?"

ಈ ಪ್ರಶ್ನೆಗಳನ್ನು ಕೇಳಿ ವ್ಯಾಘ್ರದತ್ತನು, ಸಮರ ಸೇನನ ಮುಖವನ್ನು ಪರೀಕ್ಷಿಸುವಂತೆ ನೋಡುತ್ತ, ಕಣ್ಣುಗಳನ್ನು ಮಿಟುಕಿಸಿ, "ಸಮರಸೇನಾ, ನೀನು ನನ್ನ ಮುಂದೆ ಏನೂ ತಿಳಿಯದ ಪಾಪದವನಂತೆ ನಟಿಸಿ ಪ್ರಯೋಜನವಿಲ್ಲ. ನಾನು ಅದನ್ನು ನಂಬಲಾರೆ. ನಾನು ಹೇಳುವಂಥಾದ್ದನ್ನು ಪೂರ್ತಿ ಹೇಳುತ್ತೇನೆ ಕೇಳು. ಶಮನದ್ವೀಪದ ರಾಜನಾದ ಶಾಕ್ತೇಯನ ಸಮಾಚಾರ ನಿನಗೆ ಗೊತ್ತಿದೆ. ಅವನು ದೇಶಗಳ ಮೇಲೆ ದಂಡೆತ್ತಿ ಹೋಗಿ, ದೋಚಿಕೊಳ್ಳುತ್ತಾ, ನಮ್ಮ ಕುಂಡಲಿನೀ ದ್ವೀಪವನ್ನು ಕೂಡಾ ಭಾರಿಯಾಗಿ ಕೊಳ್ಳೆ ಹೊಡೆದಿದ್ದಾನೆ. ನಮ್ಮ ಪೂರ್ವಿಕರಲ್ಲಿ ದೃಢಕಾಯರಾಗಿದ್ದವರನ್ನು ಹಿಡಿದು ತನ್ನ ಗುಲಾಮ ರನ್ನಾಗಿ ಮಾಡಿದ್ದಾನೆ. ಮತ್ತೆ ಕೆಲವು ದೇಶಗಳನ್ನು ಕೊಳ್ಳೆ ಹೊಡೆಯಲು ಹಡಗುಗಳಲ್ಲಿ ಹೊರಟಿದ್ದಾನೆ. ಹಾಗೆಯೇ ಈ ದ್ವೀಪಕ್ಕೆ ಬಂದು ಸೇರಿದ ಆ ಶಾಕ್ತೇಯ ರಾಜನು, ಇಲ್ಲಿ ಮೃತ್ಯುವಿನ ಬಾಯಿಗೆಬಿದ್ದ ಸಂಗತಿ ಯನ್ನೂ ನೀನು ಕೇಳಿರಬಹುದು. ಅವನು ಸತ್ತ ಮೇಲೆ ಗುಲಾಮರಾಗಿ ಬಂಧಿಸಲ್ಪಟ್ಟಿದ್ದ ನಮ್ಮ ಪೂರ್ವಿಕರು ಸ್ವೇಚ್ಛೆ ಪಡೆದು ಈ ದ್ವೀಪದಲ್ಲಿ ವಾಸ ಸ್ಥಳವನ್ನು ಏರ್ಪಡಿಸಿಕೊಂಡಿದ್ದಾರೆ. ಹೀಗೆ ನಮ್ಮವರು ಸ್ವತಂತ್ರರಾಗಲಿಕ್ಕೆ, ಶಾಕ್ತೇಯನ ಶಿಷ್ಯರಾದ ಇಬ್ಬರು ಮಾಂತ್ರಿಕರ ನಡುವೆ ಕೆರಳಿಕೊಂಡ ದ್ವೇಷವೂ ಸ್ವಲ್ಪ ಕಾರಣವಾಯಿತು. ಆ ಇಬ್ಬರು ಮಾಂತ್ರಿಕ ಶಿಷ್ಯರನ್ನು ನೀನು ಬಲ್ಲೆಯಷ್ಟೆ ?" ಎಂದನು.




"ಅದು ನಿಜ. ಅವರಿಬ್ಬರನ್ನು ಸ್ವಲ್ಪ ಮಟ್ಟಿಗೆ ಬಲ್ಲೆ" ಎಂದನು ಸಮರಸೇನ.

"ಹಾಗಾದರೆ ಈಗ ಹೇಳು. ಆ ಶಾಕ್ತೇಯನ ತ್ರಿಶೂಲವು ಎಲ್ಲಿದೆ ? ಚಂಡೀದೇವಿಯಿಂದ ಪ್ರಸಾದಿತ ವಾದ ಆ ತ್ರಿಶೂಲದ ಶಕ್ತಿ ಎಂತಹುದೆಂದು ನೀನು ಕೇಳಿಯೇ ಇರಬಹುದು" ಎಂದನು ವ್ಯಾಘ್ರದತ್ತ.

ತ್ರಿಶೂಲದ ಸಂಗತಿ ಕೇಳಿ ಸಮರಸೇನನು ಬೆರಗಾದನು. ವ್ಯಾಘ್ರದತ್ತನು ಶಾಕ್ತೇಯನನ್ನು ಕುರಿತು ಹೇಳಿದ ಸಂಗತಿಗಳು ಪೂರಾ ಸಮರಸೇನನಿಗೆ ಗೊತ್ತಿರಲಿಲ್ಲ. ಚತುರ್ನೇತ್ರನು ಒಂದುಸಾರಿ ಶಾಕ್ತೇಯ ನನ್ನು ಕುರಿತು ಸ್ವಲ್ಪ ಮಟ್ಟಿಗೆ ಹೇಳಿದ್ದನು. ಶಾಕ್ತೇಯನು ಕುಂಡಲಿನೀ ದ್ವೀಪವನ್ನು ಕೊಳ್ಳೆ ಹೊಡೆದ ಸಂಗತಿಯನ್ನು ಸಮರಸೇನನು ಕೇಳಿರಲಿಲ್ಲ. ಚಂಡೀದೇವಿ ಶಾಕ್ತೇಯನಿಗೆ ಪ್ರಸಾದಿಸಿದ ತ್ರಿಶೂಲದ ಸಮಾಚಾರವೂ ಸಮರಸೇನನಿಗೆ ತಿಳಿಯದು. "ವ್ಯಾಘ್ರದತ್ತಾ, ನೀನು ಕೇಳಿದ ಪ್ರಶ್ನೆಗಳು ನನಗೆ




ಹೊಸದಾಗಿಯೇ ಇವೆ. ಅದಾವುದೂ ನನಗೆ ತಿಳಿಯದು. ನೀನು ತಪ್ಪಾಗಿ ಅನುಮಾನಿಸಿ ನನ್ನನ್ನು ಬಂಧಿಸಿ ತರಿಸಿರುವೆ, ಆ ಶಾಕ್ತೇಯನು ಏನೆಲ್ಲ ಮಾಡಿದನೆಂಬುದಾಗಲಿ, ತ್ರಿಶೂಲದ ಸಂಗತಿಯಾಗಲೀ ಸತ್ಯಪ್ರಮಾಣಕ್ಕೂ ನನಗೆ ತಿಳಿಯದು" ಎಂದನು ಸಮರಸೇನ. ಅದನ್ನು ಕೇಳಿ ವ್ಯಾಘ್ರದತ್ತನು ಕೋಪ ದಿಂದ ಕೆಂಗಣ್ಣು ಮಾಡಿಕೊಂಡು "ನೀನು ಪಾಪದವ ನಂತೆ ನಟಿಸಿ ನನ್ನನ್ನು ಮೋಸಪಡಿಸಲು ಸಾಧ್ಯವಿಲ್ಲ. ನಾಳೆ ಬೆಳಿಗ್ಗೆ ಹತ್ತು ಗಂಟೆಯ ವರೆಗೂ ನಿನಗೆ ಅವಕಾಶ ಕೊಡುತ್ತೇನೆ. ಅಷ್ಟರೊಳಗೆ, ನಿನಗೆ ಕ್ಷೇಮವಾಗಿರ ಬೇಕೆಂದಿದ್ದರೆ ನಿಜ ಸಂಗತಿಯನ್ನು ಹೇಳುಬಿಡುವುದು ಒಳ್ಳೆಯದು. ಅದಕ್ಕೆ ತಪ್ಪಿದೆಯಾದರೆ ನಿನ್ನನ್ನು ಚಿತ್ರಹಿಂಸೆಗೆ ಗುರಿಪಡಿಸಿ, ಭದ್ರಚಾಮುಂಡಿಗೆ ಬಲಿ ಗೊಟ್ಟು ಬಿಡುತ್ತೇನೆ. ಇಲ್ಲಿ ನಿನ್ನನ್ನು ಕಾಪಾಡುವವರು ಯಾರೂ ಇಲ್ಲವೆಂಬುದನ್ನು ಚೆನ್ನಾಗಿ ನೆನಪಿಟ್ಟುಕೋ!" ಎಂದನು ಭೀಕರ ಧ್ವನಿಯಿಂದ.

ಸಮರಸೇನನು ಏನೂ ಹೇಳದೆ ಮರಗಟ್ಟಿದಂತೆ ನಿಂತನು. ತನಗೆ ಸ್ವಲ್ಪವೂ ತಿಳಿಯದ ಸಮಾಚಾರ ವನ್ನು, ತಿಳಿದಿವೆ ಎಂಬ ಭ್ರಮೆಯಿಂದ ಬಲವಂತ ಮಾಡುತ್ತಿದ್ದಾನೆ. ಈ ತಪ್ಪು ಅವನಿಗೆ ತಿಳಿಯದ್ದರಿಂದ, ಮಾತಾಡಿ ಪ್ರಯೋಜನವಿಲ್ಲವೆಂದು ಸಮರಸೇನನಿಗೆ ಗೊತ್ತಾಯಿತು.

ವ್ಯಾಘ್ರದತ್ತನ ಆಜ್ಞೆಯಿಂದ ಇಬ್ಬರು ಭಟರು ಸಮರಸೇನನನ್ನು ಎಳೆದುಕೊಂಡು ಹೊರಟರು. ಒಂದು ಕತ್ತಲೆ ಕೋಣೆಯೊಳಗೆ ಅವನನ್ನು ಸೇರಿಸಿ, ಕೈ ಕಾಲುಗಳನ್ನು ಹಗ್ಗದಿಂದ ಕಟ್ಟಿ ಹಾಕಿದರು. ಆ ಕೋಣೆಯ ಒಂದು ಬದಿಯಲ್ಲಿ ಭಯಂಕರಾಕಾರದ ವಿಗ್ರಹ ನಿಂತಿದ್ದಿತು. ಅದೇ ಭದ್ರಚಾಮುಂಡೀ ವಿಗ್ರಹವಾಗಿರಬೇಕು.

ಭಟರು ಆ ವಿಗ್ರಹವನ್ನು ಸಮರಸೇನನಿಗೆ ತೋರಿಸಿ, "ನಾಳೆ ಬೆಳಿಗ್ಗೆ ಒಂದು ಜಾಮದೊಳಗೆ, ನಮ್ಮ ನಾಯಕನ ಮುಂದೆ ನಿಜ ಸಂಗತಿ ಹೇಳದೆ ಹೋದರೆ, ಈ ದೇವಿಗೆ ನೈವೇದ್ಯವಾಗುವುದು ಖಂಡಿತ. ಚೆನ್ನಾಗಿ ಆಲೋಚಿಸಿ ನಿರ್ಣಯಿಸಿಕೊ." ಎಂದು ಎಚ್ಚರಿಕೆ ಹೇಳಿ ಅಲ್ಲಿಂದ ಹೊರಗೆ ಹೋಗಿ ಬಾಗಿಲು ಮುಚ್ಚಿ ತಾಳ ಭದ್ರಮಾಡಿ ಹೋದರು.

ಮತ್ತೆ ಸಮರಸೇನನು ಯಾತನೆಗೆ ಬಿದ್ದನು. ಕೈ ಕಾಲುಗಳನ್ನು ಕದಲಿಸಲಾಗದ ನೋವಿನೊಂದಿಗೆ ಹಸಿವೆಯ ಸಂಕಟವೂ ಸೇರಿತ್ತು, ಬೆಳಗಾದ ಮೇಲೆ ಮರಣವೂ ಕಾದಿದೆ. ಇಂತಹ ಆಪತ್ತಿನ ಸಮಯದಲ್ಲಿ ಚತುರ್ನೇತ್ರನಂತಹ ಮಹಾ ಮಾಂತ್ರಿಕನ ಹೊರತು, ತನಗೆ ಸಹಾಯಮಾಡುವವರು ಮತ್ತಾರೂ ಕಾಣ ಲಿಲ್ಲ. ಆದರೆ ಚತುರ್ನೇತ್ರನಿಗೆ ತನ್ನ ಗತಿ ಹೀಗಾಗಿರುವ ಸಮಾಚಾರ ಹೇಗೆ ಗೊತ್ತಾದೀತು?

ಕುಂಡಲಿನೀದೇವಿ ಪೂರ್ತಿ ತನ್ನ ಕೈ ಬಿಟ್ಟಳೆಂಬ ನಿರಾಶೆಯಿಂದ, ಸಾಯಲಿಕ್ಕೆ ಸಿದ್ಧನಾಗಿ ಅವಳನ್ನೇ ಧ್ಯಾನಿಸುತ್ತ ಕಣ್ಣು ಮುಚ್ಚಿಕೊಂಡಿರಲು, ಮೆಲ್ಲ

ಮೆಲ್ಲನೆ ನಿದ್ದೆಯು ಮಂಪರು ಬರತೊಡಗಿತು. ಏನೋ ಶಬ್ದಕ್ಕೆ ಎಚ್ಚರವೂ ಆಯಿತು. ಯಾರೋ ಬಾಗಿಲು ತೆರೆಯುವ ಶಬ್ದ ಕೇಳಿ, ಬೆಳಗಾಯಿತೇನೋ, ಕೊಲೆಗಡಕರೇ ಬಂದರೇನೋ ಎಂದು ಪಿಳಿ ಪಿಳಿ ನೋಡಿದನು.

ಬಿಚ್ಚು ಗತ್ತಿಗಳನ್ನು ಹಿಡಿದ ಇಬ್ಬರು ಮನುಷ್ಯರು ಒಳಗೆ ಬಂದರು. ವ್ಯಾಘ್ರದತ್ತನ ಅಪ್ಪಣೆಯಿಂದ ಈಗಲೇ ತನಗೆ ಚಿತ್ರಹಿಂಸೆ ಪ್ರಾರಂಭವಾಗುವುದೆಂದು ಸಮರಸೇನನಿಗೆ ತೋರಿತು. ಅಷ್ಟರಲ್ಲಿ ಅವರು ಕತ್ತಿಗಳನ್ನು ಒರೆಗಿಳಿಸಿ, ಸಮರಸೇನನ ಕೈ ಕಾಲುಗಳ ಕಟ್ಟುಗಳನ್ನು ಬೇಗ ಬೇಗನೆ ಬಿಚ್ಚಿದರು. ತೆರೆದ ಬಾಗಿಲಲ್ಲಿ ಹೊರಗಿನ ಕತ್ತಲೆಯನ್ನೂ, ಆಕಾಶದ ನಕ್ಷತ್ರವನ್ನೂ, ಮಂದ ಬೆಳುದಿಂಗಳನ್ನೂ ನೋಡಿ ಇನ್ನೂ ಬೆಳಗಾಗಿಲ್ಲವೆಂದು ತಿಳಿಯಿತು. ಏನು ನಡೆಯುವುದೆಂದು ಸಮರಸೇನನು ಆಶ್ಚರ್ಯದಿಂದ ನೋಡುತ್ತಿರಲು, ಅವರು ಸಮರಸೇನನನ್ನು ತಮ್ಮ ಹಿಂದೆ ಬರಲು ಸಂಜ್ಞೆಮಾಡಿ, ಮುಂದೆ ನಡೆದರು. ಸಮರಸೇನನೂ ಅವರ ಹಿಂದೆಯೇ ನಡೆದನು. ಅವರು ಸಮರಸೇನನ ಬಾಯಿಗೆ ಕೈಯಿಟ್ಟು ಮಾತಾಡ ಬೇಡವೆಂದು ಸೂಚಿಸಿದರು.

ಅವರು ಕಳ್ಳರಂತೆ ಸಮರಸೇನನನ್ನು ಕರೆದು ಕೊಂಡು ಸ್ವಲ್ಪ ದೂರ ಹೋಗಲು, ಆಯುಧ ಧಾರಿಗಳಾದ ಇಬ್ಬರು ಭಟರು ಅದೇ ಮಾರ್ಗದಲ್ಲಿ ಇದಿರಾಗಿ ಬರುವುದು ಕಂಡಿತು. ಕೂಡಲೇ ಸಮರಸೇನನನ್ನು ಕರೆದೊಯ್ಯುವವರು ಅವನನ್ನು ಒಂದು ಮನೆಯ ಬದಿಯ ಕತ್ತಲೆಯ ಕಡೆಗೆ ಕರೆದೊಯ್ದು ಅಡಗಿರಿಸಿಕೊಂಡರು.

"ಭಯವೇನಿಲ್ಲ. ನಾವು ನಿನ್ನ ಮಿತ್ರರೇ. ಅಲ್ಲಿ ಬರುವವರು ಗಸ್ತೀ ತಿರುಗುವ ವ್ಯಾಘ್ರದತ್ತನ ಸೇವಕರು. ನಾವು ಈ ಕತ್ತಲೆಯಲ್ಲಿ ಅಡಗಿದ್ದು, ಅವರು ಹತ್ತಿರ ಬಂದ ಕೂಡಲೇ ಅವರ ಮೇಲೆ ಬಿದ್ದು ಹತಮಾಡಿ ಬಿಡಬೇಕು. ಏಕೆಂದರೆ ಅವರು ಕತ್ತಲೆಯಲ್ಲಿಯೂ ಹುಡುಕಿ ಹಿಡಿಯುವವರು!" ಎಂದರು. ಮಿತ್ರರೆಂದು ಹೇಳಿದವರು ಮಾತು ನಿಲ್ಲಿಸುವಾಗಲೇ, ಗಸ್ತೀ ಭಟರು ಅಲ್ಲಿಗೇ ಬಂದರು. ಕೂಡಲೇ ಕತ್ತಲೆಯಲ್ಲಿ ಹೊಂಚಿಕೊಂಡಿದ್ದ ಮೂವರೂ ಮಿಂಚಿನ ವೇಗದಲ್ಲಿ ಅವರ ಮೇಲೆ ಹಾರಿ ಆ ಭಟರಿಗೆ ಕೂಗಲಿಕ್ಕೂ ಅವಕಾಶವಿಲ್ಲದಂತೆ, ಅವರ ಗಂಟಲನ್ನು ಇಕ್ಕುಳದ ಹಾಗೆ ಅಮುಕಿ ಹಿಡಿದು ಎಳೆದುಕೊಂಡು ಹೋಗಿ, ಸಮೀಪದಲ್ಲಿದ್ದೊಂದು ಪಾಳು ಬಾವಿಯೊಳಗೆ ದೂಡಿಬಿಟ್ಟರು. ಅಷ್ಟಾದ ಮೇಲೆ ಮೂವರೂ ಗುಡ್ಡದ ದಾರಿಯಲ್ಲಿ ನಡೆಯುತ್ತ, ಸೂರ್ಯೋದಯವಾಗುವ ಹೊತ್ತಿಗೆ ಯಾವುದೋ ಒಂದು ಚಿಕ್ಕ ಹಳ್ಳಿಯನ್ನು ಸೇರಿದರು. (ಇನ್ನೂ ಇದೆ)






# ಬದಲಾದ ನಿರ್ಣಯ

ಕೆತ್ತರಿಸಿದ ಹಾಗೆ ಮತ್ತೆ ಬೆಳೆಯುವ ಕೂದಲಿನಂತೆ ಕಥೆ ಹೇಳುತ್ತಾ ಇರುವ ಬೇತಾಳನ ತಲೆಯು ಮಿದುಳಿನ ಬೆಳವಣಿಕೆಯನ್ನು ಕುಂಠಿಸದೆ ಬಿಡಲಾರೆನೆಂಬ ಹಠತೊಟ್ಟಂತಹ ರಾಜಾ ತ್ರಿವಿಕ್ರಮನು, ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ, ತನ್ನ ಹೆಗಲ ಮೇಲೆ ಹಾಕಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯುತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ರಾಜಾ, ಹೀಗೆ ವೇಳೆಯ ಪರಿವೆ ಇಲ್ಲದೆ ಅಪರಾತ್ರಿ ನಡುರಾತ್ರಿಗಳಲ್ಲಿ ಸ್ಮಶಾನದಲ್ಲಿ ಎಷ್ಟು ಕಾಲ ತಿರುಗುವಿಯೋ ? ಒಂದೊಂದುಸಾರಿ ಮನುಷ್ಯನು ತನ್ನ ನಿರ್ಣಯವನ್ನು ಬದಲಾಯಿಸಿಕೊಳ್ಳುವುದರಿಂದ ಒಳಿತಾಗಿಬಿಡುವುದೂ ಉಂಟು. ಕಡೇಕ್ಷಣದಲ್ಲಿ ತನ್ನ ನಿರ್ಣಯವನ್ನು ಬದಲಾಯಿಸಿಕೊಂಡ ನಾಗರಾಜನೆಂಬ ಹಟಗಾರನ ಕಥೆಯನ್ನು ಹೇಳುತ್ತೇನೆ. ನಡೆಯುವ ಶ್ರಮ ತಿಳಿಯಂತೆ ಕೇಳುತ್ತಾ ನಡೆ' ಎಂದು ಕಥೆಯನ್ನು ಪ್ರಾರಂಭಮಾಡಿತು :

ನಾಗರಾಜನೆಂಬ ಆ ಯುವಕನಿಗೆ ನಗರದಲ್ಲಿ

## ಬೇತಾಳಕಥೆಗಳು?...




ಒಳ್ಳೆಯ ಉದ್ಯೋಗವಿದ್ದಿತು. ಇನ್ನೂ ಅವನು ಮದುವೆಯಾಗಿರಲಿಲ್ಲ. ಅವನಿಗಾಗಿ ಅವನ ಸೋದರಿಕೆಯಲ್ಲೇ ಹಕ್ಕಿನ ಹುಡುಗಿಯೊಬ್ಬಳಿದ್ದಳು. ಅವನ ಸೋದರ ಮಾವನ ಮಗಳು ರತ್ನಳನ್ನು ಸೊಸೆಯಾಗಿ ಮನೆಗೆ ತಂದುಕೊಳ್ಳಬೇಕೆಂದು ಅವನ ತಾಯಿಗೆ ತುಂಬಾ ಆಸೆಯಿದ್ದಿತು. ರತ್ನಳು ಹಳ್ಳಿಯಲ್ಲೇ ಹುಟ್ಟಿ ಬೆಳೆದವಳು. ಹೆಚ್ಚೇನೂ ಓದಿಕೊಂಡವಳಲ್ಲ. ಹೇಳಿಕೊಳ್ಳುವಷ್ಟು ಸುಂದರಿ ಎನ್ನಲೂ ಸಾಧ್ಯವಿಲ್ಲ. ಅವಳಿಗೆ ನಾಗರಾಜನ ಮೇಲೆ ಅತ್ಯಂತ ಅನುರಾಗವಿದ್ದಿತು. ಆದರೆ ಯಾವ ಪ್ರತ್ಯೇಕ ಆಕರ್ಷಣೆಯೂ ಇಲ್ಲದ ರತ್ನಳ ಮೇಲೆ ನಾಗರಾಜನಿಗೆ ಇಷ್ಟವಿರಲಿಲ್ಲ.

ಅವನು ಆಗಾಗ ಸೋದರ ಮಾವನ ಮನೆಗೆ ಹೋಗಿಬರುವುದಿತ್ತು. ರತ್ನಳೊಡನೆ ಮಾತುಕತೆಯಾಡುವುದೂ ಇತ್ತು. ತಾಯಿ ಅವಳನ್ನು ಮದುವೆಯಾಗುವಂತೆ ಕೆಲವು ಬಾರಿ ಹೇಳಿದ್ದೂ ಇತ್ತು. ಆದರೆ ನಾಗರಾಜನು ಕುತೂಹಲ ತೋರಿಸಲಿಲ್ಲ. ಕಡೆಗೊಮ್ಮೆ ಯಾವುದೋ ಹಬ್ಬದ ದಿನ ಅವನು ನಗರದಿಂದ ಸ್ವಂತ ಊರಿಗೆ ಹೋದನು. ಅಲ್ಲಿ ತಾಯಿ ತಂದೆಯರು ಅವನೊಂದಿಗೆ, "ಇನ್ನು ತಡಮಾಡಬಾರದಪ್ಪ. ನಿನಗೂ ಪ್ರಾಯ ಬಂದಿದೆ. ಬೇಗದಲ್ಲೇ ರತ್ನಳನ್ನೂ ಮದುವೆಯಾಗಿ ಜತೆಯಲ್ಲಿ ಕರೆದುಕೊಂಡು ಹೋಗಿಬಿಡು" ಎಂದರು.

ನಾಗರಾಜನು ಖಂಡಿತ ಉತ್ತರ ಕೊಡದೆ, "ನೋಡುತ್ತೇನೆ. ಸಮಯ ಬರಲಿ" ಎಂದು ಜಾರಿಕೆಯ ಉತ್ತರ ಹೇಳಿ ಸುಮ್ಮನಾದನು,

ಆ ದಿನ ಸಾಯಂಕಾಲ ನಾಗರಾಜನು ಊರಿಗೆ ದೂರದಲ್ಲಿರುವ ಮಾವಿನ ತೋಪಿನ ಕಡೆಗೆ ವಿಹಾರ ಹೊರಟನು. ಸೂರ್ಯನು ಮುಳುಗುವ ಸಮಯದಲ್ಲಿ ಮಳೆಬರಲು ಪ್ರಾರಂಭವಾಯಿತು. ಅವನು ಸ್ವಲ್ಪ ದೂರ ಓಡುತ್ತಾ ಹೋಗಿ, ಒಂದು ಹೆಂಚಿನ ಮನೆಯ ಬದಿಯಲ್ಲಿ ಅಂಟಿದಹಾಗೆ ನಿಂತನು.

"ಏನಪ್ಪಾ, ಚೆನ್ನಾಗಿ ನೆನೆದ ಹಾಗಿದೆ. ಒಳಗೆ ಬಾರಪ್ಪ" ಎಂದು ಕಿಟಿಕಿಯಿಂದ ಅವನನ್ನು ನೋಡಿದ ನಡುವಯಸ್ಸು ದಾಟಿದ ಹೆಂಗುಸು ಕರೆದು ಬಾಗಿಲು ತೆರೆದಳು.

ನಾಗರಾಜನು ದಾಕ್ಷಿಣ್ಯ ಪಡುತ್ತಾ, ಮೈ ಕೈ ಸಂಕೋಚಪಡಿಸಿಕೊಂಡು ಒಳಗೆ ಹೋದನು.

"ಸಂಧ್ಯಾ, ಒಣಗಿದ ಬಟ್ಟೆತಾರಮ್ಮಾ. ಇವನು ಮಳೆಯಲ್ಲಿ ಪೂರಾ ನೆನೆದಿದ್ದಾನೆ ಪಾಪ!" ಎಂದು ತಾಯಿ ಕೂಗಿ ಹೇಳಿದಳು. "ಚಂದವಾದ ಹೆಸರು!" ಎಂದುಕೊಂಡನು ತ್ಯಾಗರಾಜ.

ಅಷ್ಟರಲ್ಲಿ ಕಾಲುಗಳಲ್ಲಿಯ ಗೆಜ್ಜೆಗಳ, ಜಿಲ್‌ಜಿಲ್ ಸುಶ್ರಾವ್ಯನಾದವು ಕೇಳಿಸಿ, ಒಳ ಬಾಗಿಲ ಹತ್ತಿರವೇ ನಿಂತುಹೋಯಿತು. ತಾಯಿ ಬಾಗಿಲ ವರೆಗೆ ಹೋಗಿ ಒಣ ಬಟ್ಟೆಯನ್ನು ತೆಗೆದುಕೊಂಡಳು. ಅವಳು ಕೊಟ್ಟ ಒಣಬಟ್ಟೆಯಿಂದ ನಾಗರಾಜನು

ತಲೆ ಒರೆಸಿಕೊಳ್ಳುತ್ತಿರುವಾಗ, "ಸ್ವಲ್ಪ ಬಿಸಿಬಿಸಿ ಹಾಲು ತೆಗೆದುಕೊಂಡುಬಾರೇ ಸಂಧ್ಯಾ" ಎಂದು ಮತ್ತೆ ಕೂಗಿ ಹೇಳಿದಳು ತಾಯಿ. ಸಂಧ್ಯಾ ಬಾಗಿಲ ಹತ್ತಿರದಿಂದ ಮತ್ತೆ ಒಳಗೆ ಹೋಗಿದ್ದರಿಂದಲೇ ಹಾಗೆ ಕೂಗಿ ಹೇಳುತ್ತಾಳೆ ತಾಯಿ.

ಆಮೇಲೆ ತಾಯಿ ನಾಗರಾಜನ ವಿಷಯವನ್ನು ಕುರಿತು ಪ್ರಶ್ನೆ ಮಾಡಿದಳು. ಅವನು ಚಿಟುಕಿನಲ್ಲಿ ಹೇಳಿದುದನ್ನು ಕೇಳಿ ತಮ್ಮ ಸಂಗತಿಯನ್ನು ಕುರಿತೂ ಹೇಳಿದಳು. ಅವರು ಈ ಊರಿಗೆ ಹೊಸದಾಗಿ ಬಂದಿದ್ದಾರಂತೆ. ಗೇಣಿಗೆ ಕೊಟ್ಟಿದ್ದ ಹೊಲವನ್ನು ಸ್ವಂತ ವ್ಯವಸಾಯ ಮಾಡಲಿಕ್ಕೇ ಹಳ್ಳಿಯೂರಿಗೆ ಬಂದಿದ್ದಾರಂತೆ. ಅವಳಿಗೆ ಸಂಧ್ಯಾ ಒಬ್ಬಳೇ ಮಗಳಂತೆ. ಗಂಡ ತೀರಿಹೋಗಿದ್ದನು.

ಸಂಧ್ಯಾಳನ್ನು ನೋಡಬೇಕೆಂದು ನಾಗರಾಜನಿಗೆ ಕುತ್ತಿಗೆಯ ತುದಿಯ ವರೆಗೂ ಕೋರಿಕೆಯಾಯಿತು. ಆದರೆ ಹಾಲು ಕೂಡಾ ಬಾಗಿಲ ವರೆಗೆ ಬಂದು ತಾಯಿಯ ಕೈಗೆ ಕೊಟ್ಟಳೇ ಹೊರತು ಹೊರಗೋಣಿಗೆ ಬರಲೇ ಇಲ್ಲ.

ಮಳೆನಿಂತ ಕೂಡಲೇ ಅಲ್ಲಿಂದ ಹೊರಟ ನಾಗರಾಜನು, ಮರುದಿನ ಬೆಳಕಿಂತಲೇ ಆ ಮನೆಯ ಕಡೆಗೆ ಹೋದನು. ಸಂಧ್ಯಾಳ ತಾಯಿ ಕಿಟಿಕಿಗಳಿಗೆ ಹೊಸತಾಗಿ ಹೆಣೆದು ಹೊಲಿದ ಸುಂದರವಾದ ತೆರೆಗಳನ್ನು ಕಟ್ಟುತ್ತಿದ್ದಳು. ಅವಳು ನಾಗರಾಜನನ್ನು ನೋಡಿದ ಕೂಡಲೇ ನಗುತ್ತಾ ಆಹ್ವಾನಿಸಿ, "ನಮ್ಮ ಸಂಧ್ಯಾ ಸುಮ್ಮನಿರುವಾಗ ಹೀಗೆ ತೆರೆಗಳಿಗೆ ಹೂ ಕೆಲಸಮಾಡುತ್ತಾಳೆ" ಎಂದಳು.

ಸ್ವಲ್ಪ ಹೊತ್ತಿಗೆ ಅವನಿಗೆ ಸಂಧ್ಯಾಳು ಮಾಡಿದ ರುಚಿಕರವಾದ ತಿಂಡಿಗಳನ್ನು ಅವಳ ತಾಯಿಯೇ ತಂದುಕೊಟ್ಟಳು.

ಇದಾದ ಮರುದಿನವೂ ನಾಗರಾಜನನ್ನು ಸಂಧ್ಯಾಳ ಮನೆಯೇ ಆಕರ್ಷಿಸತೊಡಗಿತು. ಆ ದಿನ



ತನ್ನ ತೋಟದಲ್ಲಿ ಫಲಿಸಿದ ಎರಡು ದಾಳಿಂಬೆ ಹಣ್ಣುಗಳನ್ನು ತೆಗೆದುಕೊಂಡು ಸಂಧ್ಯಾಳ ಮನೆಗೆ ಹೋದನು. ಮನೇ ಹತ್ತಿರ ಹೋಗುವಾಗ ಒಳಗಿನಿಂದ ಸುಶ್ರಾವ್ಯವಾದ ಸಂಗೀತವು ಕೇಳಿಬರುತ್ತಿತ್ತು. ನಾಗರಾಜನು ಆ ಮಧುರವಾದ ಹಾಡನ್ನು ಕೇಳುವುದರಲ್ಲಿ ತಲ್ಲೀನನಾಗಿ ನಿಂತುಬಿಟ್ಟನು. ಆಗ ದೇವಾಲಯದಿಂದ ಮನೆಗೆ ಬಂದ ಸಂಧ್ಯಾಳ ತಾಯಿಯನ್ನು ಅವನು ಗಮನಿಸಲಿಲ್ಲ.

ಸಂಧ್ಯಾಳ ತಾಯಿ ಸುಮ್ಮನೆ ಮುಚ್ಚಿಕೊಂಡಿದ್ದ ಬಾಗಿಲನ್ನು ದೂಡಿ ತೆರೆಯುತ್ತ. "ಈಗಲೇ ಬಂದೆಯಾ ನಾಗರಾಜೂ! ನಮ್ಮ ಸಂಧ್ಯಾ ಹಾಡಲು ಶುರುಮಾಡಿದರೆ, ಯಾರು ಬಂದರೂ ಗೊತ್ತಾಗೋದಿಲ್ಲ" ಎಂದಳು.

ಒಳಗಿನ ಕೋಣೆಯೊಳಗಿದ್ದ ಸಂಧ್ಯಾಳು ನಾಗರಾಜನ ಕಣ್ಣಿಗೆ ಬೀಳಲಿಲ್ಲ. ಅವನು ದಾಳಿಂಬೆ ಹಣ್ಣುಗಳನ್ನು ಸಂಧ್ಯಾಳ ತಾಯಿಯ ಕೈಗೆ ಕೊಟ್ಟು, ಸ್ವಲ್ಪ



ಹೊತ್ತು ಏನೋ ಮಾತಾಡಿ ಹಿಂದಿರುಗಿದನು. ಈಗ ಅವನು ತನಗೆ ತಕ್ಕ ಹೆಂಡತಿಯಾಗಿರ ತಕ್ಕವಳು ಸಂಧ್ಯಾಳೇ ಎಂದು ತೀರ್ಮಾನಿಸಿ ಕೊಂಡನು. ಅವಳು ಸುಂದರಿಯಾಗಿರಲಿ, ಇಲ್ಲದಿರಲಿ ಅವಳನ್ನು ಮದುವೆಯಾಗಿ ಬಿಟ್ಟರೆ ತಾನು ಸುಖ ವಾಗಿರಬಹುದೆಂದು ತೋರಿತು. ಮಾರಣೆಯ ದಿನ ನಾಗರಾಜನು ಹೇಗಾದರೂ ಮಾಡಿ, ತನ್ನ ನಿರ್ಧಾರವನ್ನು ಅವಳ ತಾಯಿಯೊಂದಿಗೆ ಹೇಳಿಬಿಡ ಬೇಕೆಂದು, ಅಲ್ಲಿಗೆ ಹೊರಟನು.

ಅವನು ಸಂಧ್ಯಾಳ ಮನೆಯನ್ನು ಸಮೀಪಿಸು ತ್ತಿದ್ದಾಗ, ಆಕಸ್ಮಿಕವಾಗಿ ಪಕ್ಕದ ಸಂದು ದಾರಿ ಯಿಂದ ಎತ್ತೊಂದು ಓಡುತ್ತಾ ಬಂದು. ನಾಗರಾಜನನ್ನು ತಿವಿದು ಮುಂದೆ ಓಡಿಹೋಯಿತು.

ನಾಗರಾಜನು ನೆಲದಲ್ಲಿ ಬಿದ್ದನು. ಅವನ ಕೈಗೆ ಗಾಯವಾಗಿ ರಕ್ತ ಸುರಿಯಿತು, ಆ ಶಬ್ದ ಕೇಳಿ ಸಂಧ್ಯಾಳ ತಾಯಿ ಹೊರಗೆ ಬಂದಳು. ಆಗ ಎದ್ದು ನಿಂತಿದ್ದ ನಾಗರಾಜನನ್ನು ನೋಡಿ, "ಏನಾಯಿತಪ್ಪಾ ? ರಕ್ತ! ಒಳಗೆ ಬಾರಪ್ಪಾ !" ಎಂದು ಆಂದೋಳನೆ ಪಡುತ್ತ ಬಂದು ಕೈಯನ್ನು ಹಿಡಿದಳು.

"ನಿಮ್ಮ ಹತ್ತಿರ ಒಂದು ಮುಖ್ಯ ವಿಷಯ ಹೇಳಬೇಕೆಂದು ಬಂದೆ. ಯಾವುದೋ ಆಲೋಚನೆ ಯಲ್ಲಿರುವಾಗ ಓಡಿ ಬರುವ ಎತ್ತನ್ನು ಗಮನಿಸದೆ ಹೋದೆ" ಎಂದನು ನಾಗರಾಜ.

ಸಂಧ್ಯಾಳ ತಾಯಿ ನಾಗರಾಜನನ್ನು ಕರೆದು ಕೊಂಡು ಹೋಗಿ ಕುರ್ಚಿಯಲ್ಲಿ ಕೂಡಿಸಿ, "ಸಂಧ್ಯಾ, ತಂಬಿಗೆಯಲ್ಲಿ ನೀರು ತೆಗೆದುಕೊಂಡು ಬಾರಮ್ಮಾ" ಎಂದು ಗಟ್ಟಿಯಾಗಿ ಕೂಗಿ ಹೇಳಿದಳು.

ಒಳಗೆ ಕಿಟಿಕೀ ಹತ್ತಿರ ನಿಂತಿದ್ದ ಸಂಧ್ಯಾ ಇದೆಲ್ಲಾ ನೋಡುತ್ತಲೇ ಇದ್ದಳು. ಅವಳ ಮುಖದಲ್ಲಿ ಕನಿಕರವೋ ಅನುತಾಪವೋ ಯಾವುದೂ ಇರಲಿಲ್ಲ. ತಾಯಿಯ ಕೂಗು ಕೇಳಿದ ಮೇಲೆ ಅವಳು ಕಿಟಿಕೀ ಹತ್ತಿರದಿಂದ ಆಚೆಗೆ ಹೋಗಿ, ಸ್ವಲ್ಪ ಹೊತ್ತಿಗೆ ನೀರು ತೆಗೆದುಕೊಂಡು ಬಂದಳು.

ಅವಳ ಸೌಂದರ್ಯವನ್ನು ನೋಡಿ ನಾಗರಾಜನ ಕಣ್ಣಿಗೆ ಮಿಂಚು ಹೊಡೆದಂತಾಯಿತು. ಅಷ್ಟೊಂದು ಸುಂದರಿಯಾದವಳನ್ನು ಅವನು ನಗರದಲ್ಲಿ ಕೂಡಾ ನೋಡಿರಲಿಲ್ಲ. ತಾಯಿ ನಾಗರಾಜನ ಗಾಯವನ್ನು ತೊಳೆದು, ಸ್ವಲ್ಪ ಅರಸಿನವನ್ನೂ, ಬಟ್ಟೆಯನ್ನೂ ತರಲು ಮಗಳಿಗೆ ಹೇಳಿದಳು.

ಸಂಧ್ಯಾ ಅರಸಿನ ಕೋಡನ್ನೂ ಬಟ್ಟೆಯನ್ನೂ ತಂದು ತಾಯಿಯ ಹತ್ತಿರ ಇಟ್ಟು ಒಳಗೆ ಹೋದಳು. ತಾಯಿ ನಾಗರಾಜನ ಗಾಯಕ್ಕೆ ಅರಸಿನವನ್ನು ತೇದು ಹಚ್ಚಿ ಬಟ್ಟೆ ಯಿಂದ ಕಟ್ಟಿದಳು. ನಾಗರಾಜನಿಗೆ ಸ್ವಲ್ಪ ನೆಮ್ಮದಿಯಾದುದನ್ನು ನೋಡಿ, "ಈಗ ಹೇಳಪ್ಪ. ಏನೋ ಮುಖ್ಯ ವಿಷಯ ಹೇಳಲು ಬಂದೆನೆಂದೆಯಲ್ಲಾ? ಏನದು?" ಎಂದು ಕೇಳಿದಳು.

"ಮತ್ತೇನಿಲ್ಲ. ಒಂದು ಶುಭಸಮಾಚಾರ. ನನ್ನ ಸೋದರ ಮಾವನ ಮಗಳೊಂದಿಗೆ ನನ್ನ ಮದುವೆ ನಿಶ್ಚಯವಾಗಿದೆ. ಮುಹೂರ್ತ ನಿಶ್ಚಯವಾದ ಮೇಲೆ ಮತ್ತೆ ತಿಳಿಸುತ್ತೇನೆ. ನೀವೂ ಸಂಧ್ಯಾಳನ್ನು ಕರೆದುಕೊಂಡು ಮದುವೆಗೆ ಬರಬೇಕು" ಎಂದು ಹೇಳಿ, ನಾಗರಾಜನು ಅಲ್ಲಿಂದ ಹಿಂದಿರುಗಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜನೇ, ಇದರಲ್ಲಿ ನನಗೊಂದು ಸಂದೇಹ. ನಾಗರಾಜನು ಸಂಧ್ಯಾಳನ್ನು ನೋಡುವುದಕ್ಕೆ ಮೊದಲು ಅವಳನ್ನೇ ಮದುವೆಯಾಗುವುದೆಂದು ನಿಶ್ಚಯ ಮಾಡಿದನಷ್ಟೆ? ಹಾಗಿರುವಾಗ ಕಡೇ ಕ್ಷಣದಲ್ಲಿ ತನ್ನ ನಿಶ್ಚಯವನ್ನು ಏತಕ್ಕೆ ಬದಲಾಯಿಸಿ ಕೊಂಡನು? ಅಷ್ಟೊಂದು ಸುಂದರಿಯಾದವಳಿಗೆ ತಾನು ತಕ್ಕವನಲ್ಲವೆಂದುಕೊಂಡನೇನು? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಒಡೆದು ಹೋಗುತ್ತದೆಂಬು ದನ್ನು ಮರೆಯಬೇಡ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ನಾಗ ರಾಜನು ತನ್ನ ನಿರ್ಣಯವನ್ನು ಬದಲಾಯಿಸಲಿಕ್ಕೆ ಸರಿಯಾದ ಕಾರಣವೇ ಇದ್ದಿತು. ಪ್ರತಿ ಮನುಷ್ಯ ನಿಗೂ ಕನಿಷ್ಠವಾದ ಕೆಲವು ಒಳ್ಳೆಯ ಗುಣಗಳು ಇರಲೇಬೇಕು. ಅವು ಲೋಪಿಸಿದಾಗ ಇತರ ಅರ್ಹತೆ ಗಳು ಎಷ್ಟಿದ್ದರೂ ಪ್ರಯೋಜನವೇನಿಲ್ಲ. ಅಥವಾ ತಾತ್ಕಾಲಿಕ ಪ್ರಯೋಜನಗಳಾದಾವು, ಅಷ್ಟೇ. ಪೌರುಷ ಆತ್ಮಾಭಿಮಾನ, ಧೈರ್ಯ ಇಂತಹವು ಗಂಡುಸಿಗೆ ಇರಬೇಕಾದ ಕನಿಷ್ಠ ಗುಣಗಳು. ಹಾಗೆಯೇ ಹೆಂಗುಸಿಗೆ ಕರುಣೆ, ಆದರಣೆ, ಸೇವಾಧರ್ಮ, ಅನುತಾಪಗಳಂತಹವು ಅಗತ್ಯವಾಗಿರಲೇಬೇಕು. ಆ ಗುಣಗಳಿಲ್ಲದವಳು ಹೆಂಡತಿಯಾಗಿಯೂ, ತಾಯಿ ಯಾಗಿಯೂ ತನ್ನ ಮೂಲ ಬಾಧ್ಯತೆಗಳನ್ನು ಸರಿಯಾಗಿ ನಿರ್ವಹಿಸಲಾರಳು. ಸಂಧ್ಯಾ ನಾಗರಾಜನ ಆಕಸ್ಮಿಕ ಅಪಾಯವನ್ನೂ, ರಕ್ತವನ್ನೂ ನೋಡಿ ಕೂಡಾ ಸ್ವಲ್ಪವೂ ಚಲಿಸಲಿಲ್ಲ. ಪರಿಚಿತನೊಬ್ಬನ ಮೇಲೆ ಸಹಾನುಭೂತಿ ಪ್ರದರ್ಶಿಸಲಿಲ್ಲ. ಅವಳದು ಕಲ್ಲಿನಂಥ ಹೃದಯುವೆಂಬುದು ಈ ಘಟನೆಯಿಂದ ನಿರೂಪಿತವಾಯಿತು. ಆದುದರಿಂದಲೇ ಎಲ್ಲಾ ಅರ್ಹತೆಗಳಿರುವ ಸೌಂದರ್ಯದ ರಾಶಿಯನ್ನು ಬಿಟ್ಟು, ಕನಿಷ್ಠ ಅರ್ಹತೆಗಳಿರುವ, ತನ್ನ ಮೇಲೆ ಅಭಿಮಾನವಿಟ್ಟಿರುವ ಸೋದರ ಮಾವನ ಮಗಳು ರತ್ನಳನ್ನೇ ಮದುವೆಯಾಗುವ ನಿಶ್ಚಯಕ್ಕೆ ಬಂದನು ನಾಗರಾಜ."

ಹೀಗೆ ತ್ರಿವಿಕ್ರಮನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದಕೊಂಬೆಗೆ ನೇತು ಹಾಕಿಕೊಂಡಿತು.





# ನಿರ್ಭೀತ ನಂದ

ಒಂದು ಊರಿನಲ್ಲಿ ರಾಜಣ್ಣನೆಂಬವನಿಗೆ ಒಬ್ಬನೇ ಒಬ್ಬ ಮಗನಿದ್ದ. ಅವನಿಗೆ ನಂದನೆಂದು ಹೆಸರಿಟ್ಟು, ತುಂಬಾ ಮುದ್ದಿನಿಂದ ಕೊಂಡಾಡುತ್ತಾ ಬೆಳೆಯಿಸಿ ಕೊಂಡಿದ್ದರು. ಎಲ್ಲರೂ ಅವನನ್ನು ಅಚ್ಚೆಮಾಡಿ ಎತ್ತಿಕೊಳ್ಳುವವರೇ. ಮಕ್ಕಳಿಗೆ ಗುಮ್ಮನೆಂದು ಹೆದರಿಕೆ ಹುಟ್ಟಿಸುವಂತಹ, ಗಡ್ಡಮೀಸೆ ಬರಗೂದಲಿನ ಆಳುಕಾಳುಗಳೂ, ವಿಕಾರವಾದ ಭಿಕ್ಷುಕರೂ ನಂದನನ್ನು ಅಚ್ಚೆಯಿಂದ ಮಾತಾಡಿಸಿ ಆಟ ತೋರಿಸುತ್ತಿದ್ದರು. ಹೀಗಾಗಿ ನಂದನಿಗೆ ಯಾರ ಮೇಲೂ ಭಯವೂ ಇಲ್ಲ, ಭಕ್ತಿಯೂ ಇಲ್ಲ. ಬೆಳೆಯುತ್ತಾ ಬಂದಂತೆ ಎಲ್ಲರನ್ನೂ ಆಶ್ಚರ್ಯ ಪಡಿಸುವಂತಹ ಅವನ ಗುಣವೆಂದರೆ, ಭಯವೆಂದರೆ ಏನೆಂಬುದೇ ಅವನಿಗೆ ತಿಳಿಯದೆ ಹೋದುದೇ! ಕತ್ತಲೆಯಲ್ಲಿ ಒಬ್ಬನೇ ಎಲ್ಲಿಗೆ ಬೇಕಾದರೂ ಹೋಗುವನು. ಮಗನ ಈ ಬಗೆಯ ನಡೆವಳಿಕೆ ಯನ್ನು ನೋಡಿ ರಾಜಣ್ಣನು ಚಿಂತಿತನಾದನು. ಹುಡುಗನ ನಿರ್ಭೀಕತನವು ಅಪೂರ್ವವಾದೊಂದು ಗುಣವಾದರೂ ಅದರಿಂದ ಎಷ್ಟೋ ಅಪಾಯಗಳು ಏರ್ಪಡಬಹುದಷ್ಟೆ? ಭಯವೇನಿಲ್ಲದೆ ದನದ ಮುಂದೆ ನಿಂತಹಾಗೆ ಹುಲಿಯ ಮುಂದೆ ನಿಂತರೆ ಏನಾದೀತು ? ಒಂದುಸಾರಿ ಮಧ್ಯ ರಾತ್ರಿಯ ಹೊತ್ತಿನಲ್ಲಿ ಊರ ಹೊರಗಿರುವ ಆಲದ ಮರದ ಮೇಲೆ ಹತ್ತಿ ಊಟದ ಎಲೆಸೆಡಲು ಆಲದ ಎಲೆತರಲು ನಂದನಿಗೆ ಹೇಳಿದನು ರಾಜಣ್ಣ. ಅಷ್ಟರೊಳಗೆ ಒಬ್ಬ ಮನುಷ್ಯನಿಗೆ ಭಯಂಕರವಾದ ರಾಕ್ಷಸವೇಷ ಹಾಕಿಸಿ ಆ ಮರದ ಮೇಲೆ ಇದ್ದು ನಂದನನ್ನು ಹೆದರಿಸಲು ಹೇಳಿದ್ದನು. ನಂದನು ನಿರ್ಭೀತಿಯಿಂದ ಮರದ ಮೇಲೆ ಹತ್ತಿದ ಕೂಡಲೇ ಮರದಲ್ಲಿದ್ದವನು ಆರ್ಭಟಿಸಿ ಹೆದರಿಸಿದನು. ನಂದನು ಸ್ವಲ್ಪವೂ ಹೆದರದ ಅವನನ್ನು ಹಿಡಿದು ಎಳೆದು ಕೆಳಗೆ ದೂಡಿ ನೆಗಾಡಿದನು. ಆ ಮನುಷ್ಯ ಕೆಳಗೆ ಬಿದ್ದು ನೋವಿನಿಂದ ಕುಂಟುತ್ತಾ ಓಡಿಹೋಗಿ ರಾಜಣ್ಣನೊಂದಿಗೆ ನಡೆದ ಸಂಗತಿಯನ್ನು ಹೇಳಿದನು. ರಾಜಣ್ಣನು ಕೃತ್ರಿಮವಾದ ಹಾವು ಚೇಳು ಗಳಿಂದಲೂ, ಇನ್ನೂ ಅನೇಕ ವಿಧವಾಗಿಯೂ ಮಗನನ್ನು ಹೆದರಿಸಲು ನೋಡಿ ನಿರಾಶನಾದನು.

ಹೀಗೆಯೇ ಬೆಳೆದು ನಂದನು ಇಪ್ಪತ್ತು ವಯಸ್ಸಿನ ಯುವಕನಾದನು. ಇನ್ನು ನಂದನು

ಆರ್. ರೇವತಿ

ಊರೊಳಗಿದ್ದರೆ ಭಯಮಿಶ್ರಿತವಾದ ಪ್ರಪಂಚವು ತಿಳಿಯಲಾರದೆಂದೂ, ನಗರಗಳಲ್ಲಿ ತಿರುಗಿದರೆ ಭಯದೊಂದಿಗೆ, ಲೋಕಜ್ಞಾನ ಕೂಡಾ ಉಂಟಾದೀತೆಂದೂ ರಾಜಣ್ಣನು ಅವನಿಗೆ ಸಾಕಷ್ಟು ಹಣವನ್ನು ಕೊಟ್ಟು, ಮೂರು ತಿಂಗಳ ವರೆಗೆ ಊರುಗಳನ್ನು ನೋಡಿ ಬಾರೆಂದು ಹೇಳಿ ಕಳುಹಿಸಿದನು.

ನಂದನು ಒಂದು ನಗರಕ್ಕೆ ಹೋದನು. ನಗರದ ಹೊರಗಿದ್ದ ಪಾಳುಸತ್ರವನ್ನು ನೋಡಿ, ರಾತ್ರಿಯಲ್ಲಿ ಮಲಗಲು ತಕ್ಕ ಸ್ಥಳವೆಂದುಕೊಂಡು ನಗರದಲ್ಲೆಲ್ಲಾ ತಿರುಗಾಡಿ, ವಿಶೇಷಗಳನ್ನೂ ವಿಚಿತ್ರಗಳನ್ನೂ ನೋಡಿದನು. ರಾತ್ರಿಯಾದ ಮೇಲೆ ಊರ ಹೊರಗಿನ ಆ ಸತ್ರಕ್ಕೇ ಹೋಗಿ ಮಲಗಬೇಕೆಂದು ಕೊಂಡು, ಆ ದಾರಿ ಹಿಡಿದು ಹೊರಟನು. ಅದನ್ನು ನೋಡಿ ಒಬ್ಬ ಮನುಷ್ಯನು ಆ ದಾರಿಯಲ್ಲಿ ಹೋಗಬಾರದೆಂದೂ, ಅದು ರಾತ್ರಿಯಲ್ಲಿ ಪಿಶಾಚಿಗಳು ನಡೆದಾಡುವ ಪ್ರಾಂತವೆಂದೂ, ಅತ್ತಕಡೆಯ ಸತ್ರದಲ್ಲಿ ಯಾರೂ ತಂಗುವುದಿಲ್ಲವೆಂದೂ ನಂದನನ್ನು ಎಚ್ಚರಿಸಿ ತನ್ನ ಪಾಡಿಗೆ ಹೋಗಿಬಿಟ್ಟನು. ಆದರೆ ನಂದನು "ಆ ವಿಶೇಷವನ್ನೂ ನೋಡಿದರಾಯಿತು. ಅದನ್ನೆಲ್ಲ ತಿಳಿಯಲಿಕ್ಕೆ ತಾನೇ ಹೊರಟಿದ್ದೇನೆ ?" ಎಂದುಕೊಂಡು ನಿರ್ಜನ ಪ್ರದೇಶದಲ್ಲಿರುವ ಆ ಪಾಳು ಸತ್ರಕ್ಕೇ ಹೋಗಿ ಮಲಗಿಕೊಂಡನು.

ಅರ್ಧರಾತ್ರಿಯ ಹೊತ್ತಿಗೆ ಪಿಶಾಚಿಗಳು ಆ ಸತ್ರಕ್ಕೆ ಬಂದು, ಮಲಗಿರುವ ನಂದನನ್ನು ನೋಡಿ ನೆಗಾಡಿದುವು. ಆ ಶಬ್ದದಿಂದ ನಂದನು ಎಚ್ಚೆತ್ತು ನೋಡಿ, "ವಿಚಿತ್ರವಾಗಿದ್ದೀರಲ್ಲಾ ? ನೀವೇನಾ ಪಿಶಾಚಿಗಳು?" ಎಂದು ಕೇಳಿದನು.

ಪಿಶಾಚಿಗಳು ಇನ್ನಷ್ಟು ಜೋರಾಗಿ ನಕ್ಕು ನಂದನನ್ನು ಮೇಲೆತ್ತಿ ಹಾಡುತ್ತ ಕುಣಿಯುತ್ತ ಊರಾಚೆಗೆ ಎಲ್ಲಿಯೋ ಇದ್ದ ಪಾಳುಬಿದ್ದ ಒಂದು ದೊಡ್ಡ ಭವನಕ್ಕೆ ಒಯ್ದುವು. ಹೂವುಗಳ ಮೇಲೆ



ಹೋಗುವ ಹಾಗೆನಿಸಿ ನಂದನಿಗೆ ಬಹಳ ಕುತೂಹಲವಾಯಿತು. ಆ ಭವನದಲ್ಲಿ ಪಿಶಾಚಿಗಳ ರಾಜನು, ಹೆಂಡತಿಯೊಂದಿಗೂ ಮಗಳೊಂದಿಗೂ ಇದ್ದನು. ಇನ್ನೂ ಅನೇಕ ಸೇವಕ ಪಿಶಾಚಿಗಳೂ ಇದ್ದವು.

ವಿನೋದ ಪ್ರಯಾಣದ ಆನಂದದಲ್ಲಿದ್ದ ನಂದನನ್ನು ಹೊತ್ತುಕೊಂಡ ಪಿಶಾಚಿಗಳು ಭವನದ ಕೋಣೆಯೊಳಗಿನ ಮಂಚದಲ್ಲಿ ಅವನನ್ನು ಬೀಸಿ ಒಗೆದು ಮಂಚವು ಗಿರ್ರನೆ ತಿರುಗಲು, "ಚೆನ್ನಾಗಿದೆ ! ಆಹಾ ! ಹಾ !" ಎಂದು ನಂದನು ಆನಂದಿಸಿದನು.

ಪಿಶಾಚಿಗಳಿಗೆ ಆಶ್ಚರ್ಯವಾಯಿತು. ತಮ್ಮನ್ನು ನೋಡಿದ ಕೂಡಲೇ ಹೆದರಿ ಕೂಗುವ ಮನುಷ್ಯರಷ್ಟೇ ಅವಕ್ಕೆ ಗೊತ್ತು ! ಈ ವಿಚಿತ್ರ ಮನುಷ್ಯನನ್ನು ನೋಡಿ ಪಿಶಾಚಿಗಳು ಆಶ್ಚರ್ಯದಿಂದ ಓಡಿ ಹೋಗಿ ರಾಜನೊಂದಿಗೆ ಈ ಸಮಾಚಾರವನ್ನು ಹೇಳಿದುವು. ಆ ಪಿಶಾಚರಾಜನು ಗೇಣುದ್ದವಿದ್ದು, ಮಾರುದ್ದ ಗಡ್ಡದಿಂದ, ಅವನು ನಡೆಯುವಾಗ ಗಡ್ಡವು

ನೆಲದಲ್ಲಿ ಸಾಗುತ್ತಿತ್ತು. ಕೋಪದಿಂದ ತನ್ನ ಹತ್ತಿರ ಬಂದ ಪಿಶಾಚ ರಾಜನನ್ನು ನೋಡಿ ನಂದನಿಗೆ ಇನ್ನಷ್ಟು ವಿನೋದವೆನಿಸಿತು. ಅವನು ಚಪ್ಪಾಳೆ ತಟ್ಟುತ್ತ ಪಿಶಾಚ ರಾಜನ ಕೈಯಲ್ಲಿದ್ದ ಕೊಡಲಿಯನ್ನು ಎಳೆದು ಕೊಂಡನು. ರಾಜನಿಗೆ ಮಹಾ ಕೋಪ ಬಂದು ಮುಂಚವನ್ನು ಇನ್ನಷ್ಟು ಜೋರಾಗಿ ತಿರುಗಿಸಿದನು. ನಂದನ ಆನಂದವು ಹೆಚ್ಚುತ್ತಿತ್ತೇ ಹೊರತು ಸ್ವಲ್ಪವೂ ಹೆದರುವ ಲಕ್ಷಣ ಕಾಣಲಿಲ್ಲ. ಆದರ ಮೇಲೆ ನಂದನು ಕೊಡಲಿಯನ್ನು ತಿರುಗಿಸುವಾಗ ಅದು ರಾಜನ ಗಡ್ಡದ ಮೇಲೆ ತಾಗಿತು. ಗಡ್ಡವು ಭವನದ ಮೇಲ್ಮುಚ್ಚುಗೆಯ ಕೊಕ್ಕೆಗೆ ಸಿಕ್ಕಿ ಕೊಂಡಿತು. ಗೇಣುದ್ದದ ಪಿಶಾಚರಾಜ ಅದರಲ್ಲಿ ನೇತಾಡತೊಡಗಿದ !"

"ಅಯ್ಯಯ್ಯೋ ! ಮನಷಪ್ಪೋ ! ನನ್ನನ್ನು ಕೆಳಗೆಳೆದುಕೊಳ್ಳೋ !" ಎಂದು ಪಿಶಾಚರಾಜನು ಕಿರಿಚಲು, ನಂದನು ನಗುತ್ತಾ ಅವನ ಗಡ್ಡ ಹಿಡಿದು ಕೆಳಗೆ ಎಳೆದನು.

"ಆಹಾ ! ಗಟ್ಟಿಗ ಮನುಷ್ಯಾ ! ಮೆಚ್ಚಿದೆ ನಿನ್ನ ಧೈರ್ಯಕ್ಕೆ. ನಿನ್ನಂಥ ಮನುಷ್ಯನ್ನ ನಾನ್ನೋಡಿಲ್ಲ. ನಿನಗೆ ನನ್ನ ಹತ್ತಿರವಿರುವ ಹಣವೆಲ್ಲಾ ಕೊಡ್ತೇನೆ. ತಕೊಂಡು ನನ್ನ ಮಗಳನ್ನೂ ಮದುವೆ ಮಾಡಿಕೊ" ಎಂದನು. ಅವನು ಮಗಳು ಎಂದವಳು ಮಾನವ ಕುಮಾರಿಯೇ. ಅದರಲ್ಲೂ ರಾಜಕುಮಾರಿಯಾಗಿದ್ದಳು. ಪಿಶಾಚರಾಜನು ಮಕ್ಕಳ ಮೇಲಿನ ಆಸೆಯಿಂದ ಆ ರಾಜಕುಮಾರಿಯನ್ನು ಚಿಕ್ಕಹುಡುಗಿಯಾಗಿದ್ದಾಗಲೇ ಹಾರಿಸಿಕೊಂಡು ತಂದು ಪೋಷಿಸುತ್ತಿದ್ದನು. ಈ ಸಂಗತಿ ತಿಳಿದು ನಂದನು ಪಿಶಾಚ ರಾಜನು ಕೊಟ್ಟ ಧನವನ್ನೂ, ರಾಜಕುಮಾರಿಯನ್ನೂ ಕರೆದುಕೊಂಡು, ಆ ರಾಜಕುಮಾರಿಯ ತಂದೆಯ ಬಳಿಗೇ ಹೋದನು.

ಚಿಕ್ಕಂದಿನಿಂದ ಕಾಣದೇ ಹೋದ ಮಗಳು ಹೀಗೆ ತಿರುಗಿ ಬಂದುದನ್ನು ನೋಡಿ ರಾಜನು ಅತ್ಯಾನಂದದಿಂದ ಉತ್ಸವ ಮಾಡಿಸಿದನು. ಆ ಉತ್ಸವಕ್ಕೆ ನಂದನ ತಂದೆಯನ್ನೂ ಕರೆಯಿಸಿದನು. ಸಂಗತಿಯನ್ನೆಲ್ಲಾ ತಿಳಿದು ರಾಜಣ್ಣನಿಗೆ ಸಂತೋಷವಾದರೂ, ಇದೇನೋ ಮಗನ ಅದೃಷ್ಟವೆಂದೂ, ಭಯವು ಗೊತ್ತಿಲ್ಲದವನಿಗೆ ಎಂದಾದರೂ ಅಪಾಯವಾದೀತೆಂದೂ ಇರುವ ತನ್ನ ಚಿಂತೆಯನ್ನೇ ರಾಜನೊಂದಿಗೆ ವ್ಯಕ್ತಪಡಿಸಿದನು.

"ಅದಕ್ಕಾಗಿ ಚಿಂತಿಸಬಾರದು. ಧೈರ್ಯಸಾಹಸಗಳು ಅಪೂರ್ವ ಗುಣ. ಅದು ಎಲ್ಲರಿಗೂ ಇರದು. ಆದರೊಂದಿಗೆ ಜಾಗರೂಕತೆ ಇದ್ದರೆ ಸಾಕು. ಅದನ್ನೊಂದು ತಿಳಿದುಕೊಂಡರೆ ನಂದನ ಜೀವಿತವು ಭವ್ಯವಾಗುತ್ತದೆ" ಎಂದನು ರಾಜ.





# ನ್ಯಾಯಸೂತ್ರ

ಕೆಲವು ಸಾವಿರ ವರ್ಷಗಳ ಹಿಂದೆ ಧವಳಗಿರಿ ಎಂಬ ರಾಜ್ಯವನ್ನು ಧರ್ಮಪಾಲನೆಂಬ ರಾಜನು ರಾಜಧರ್ಮವನ್ನು ತಪ್ಪದೆ ಪ್ರಜೆಗಳನ್ನು ಪಾಲಿಸಿ ಕೊಂಡಿದ್ದನು. ದಾನದಲ್ಲಿಯೂ ನ್ಯಾಯದಲ್ಲಿಯೂ ಆವನಿಗೆ ಸಮಾನರಾದ ರಾಜರು ಯಾರೂ ಇಲ್ಲವೆಂದು ಹೆಸರು ಪಡೆದಿದ್ದನು. ನ್ಯಾಯನಿರ್ಣಯ ದಲ್ಲಂತೂ ತನ್ನವರು ಇತರರು ಎಂಬ ಭೇದಭಾವವು ಸ್ವಲ್ಪ ಕೂಡಾ ಅವನಿಗಿರಲಿಲ್ಲ. ತನ್ನವರೇ ಆದರೂ ಇತರರಂತೆಯೇ ಎಲ್ಲರ ಇದಿರಲ್ಲೇ ವಿಚಾರಣೆ ನಡೆಸಿ ಶಿಕ್ಷಿಸಿಬಿಡುತ್ತಿದ್ದನು.

ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು ಎಂಬುದೇ ಅವನ ನ್ಯಾಯಸೂತ್ರ. ಒಬ್ಬನಿಂದ ಯಾವನಾದರೂ ಕೇಡು ಅನುಭವಿಸಿದರೆ ಅದೇ ಪದ್ಧತಿಯಲ್ಲಿ ಕೇಡು ಮಾಡಿದವನೂ ಕೇಡಿಗೀಡಾದವನಿಂದಲೇ ಹಗೆ ತೀರಿಸಿಕೊಳ್ಳಬಹುದಾಗಿತ್ತು. ಆಗ ಅಮಲಿನಲ್ಲಿದ್ದ ನ್ಯಾಯಸೂತ್ರವೇ ಅಂತಹುದು.

ಒಂದುದಿನ ಧರ್ಮಪಾಲ ರಾಜನು ತುಂಬಿದ ಸಭೆಯಲ್ಲಿ ಸಿಂಹಾಸನದ ಮೇಲೆ ಆರೂಢನಾಗಿದ್ದನು. ಮಂತ್ರಿ ಸಾಮಂತಾದಿಗಳೆಲ್ಲರೂ ಸಭೆಯಲ್ಲಿ ಅಲಂಕರಿಸಿದ್ದರು. ರಾಜ್ಯಪಾಲನೆಗೆ ಸಂಬಂಧಿಸಿದ ಯಾವುದೋ ಮುಖ್ಯ ವಿಷಯವಾಗಿ ಚರ್ಚೆ ನಡೆಯುತ್ತಿದ್ದಿತು. ಆ ಸಮಯದಲ್ಲಿ ಒಂದು ನಾಗರಹಾವು ದಾರಿತಪ್ಪಿ ಸರಸರನೆ ಸಭೆಯೊಳಗೆ ಪ್ರವೇಶಿಸಿ ಬಿಟ್ಟಿತು !

ನಾಗರಹಾವನ್ನು ನೋಡಿದ ಕೂಡಲೇ ಸಭೆಯಲ್ಲಿ ಕಲಕಲರವವೆದ್ದಿತು. ಕೆಲವರು ಕತ್ತಿಹಿಡಿದು ಅದನ್ನು ಕೊಲ್ಲಲು ಸಿದ್ಧರಾದರು. ಆಗ ತಂದೆಯ ಬಳಿಯಲ್ಲಿ ಕುಳಿತಿದ್ದ ಯುವರಾಜನು ಎಲ್ಲರನ್ನೂ ನಿವಾರಿಸಿ, ತನ್ನ ಖಡ್ಗದಿಂದ ಆ ನಾಗರಹಾವನ್ನು ಎರಡು ತುಂಡುಮಾಡಿ ಹಾಕಿಬಿಟ್ಟನು. ನಾಗರಹಾವು ತೋರಿದ್ದೂ, ಆಂದೋಳನವೆದ್ದದ್ದೂ, ಅದು ಎರಡು ತುಂಡಾದದ್ದೂ ಕಣ್ಣುಮುಚ್ಚಿ ಬಿಡಿಸುವುದರೊಳಗೇ ನಡೆದುಹೋದುವು.

ಹಾಗೆ ತುಂಡಾದ ನಾಗರಹಾವು ತಲೆಯಿರುವ ತುಂಡಿನೊಂದಿಗೆ ಯಾವುದೋ ಆಸನದ ಅಡಿಯಲ್ಲಿ ತೂರಿ ಕಾಣದೆ ಹೋಗಿ ತನ್ನ ಹುತ್ತಿನೊಳಗೆ ಸೇರಿಕೊಂಡಿತು. ಆ ನಾಗನ ಹೆಂಡತಿ ನಾಗಿಣಿ ತನ್ನ ಗಂಡನಿಗೆ ಬಂದ ವಿಪತ್ತನ್ನು ನೋಡಿ ಶೋಕಿಸ

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



ತೊಡಗಿದಳು. ಆಗ ನಾಗನು ತಾನು ದಾರಿತಪ್ಪಿ ಸಭೆಯೊಳಗೆ ಒಂದು ಬದಿಯಲ್ಲಿ ಯಾರಿಗೂ ಹಾನಿ ಮಾಡದೆ ತನ್ನ ಪಾಡಿಗೆ ಹೋಗುತ್ತಿರಲು, ಯುವರಾಜನು ತನ್ನನ್ನು ಹೀಗೆ ಮಾಡಿದನೆಂದು ಹೇಳಿ, "ಈ ರಾಜ್ಯದಲ್ಲಿರುವ ನ್ಯಾಯ ನಿನಗೆ ಗೊತ್ತಿದೆಯಷ್ಟೆ ? ಆ ಪ್ರಕಾರವೇ ರಾಜನು ನ್ಯಾಯವಿಚಾರಣೆ ನಡೆಸಿ ತನ್ನ ಮಗನಿಗೆ ಶಿಕ್ಷೆ ವಿಧಿಸುತ್ತಾನೆ. ಆದುದರಿಂದ ಆ ಕಟ್ಟಳೆಯಂತೆ ಯುವರಾಜನನ್ನು ನೀನು ಕಡಿದು ಕೊಲ್ಲಬೇಕಾಗುತ್ತದೆ. ಆದರೆ ನಿನ್ನ ಪಾಡಿಗೆ ನೀನು ಹೋಗಿ ಅವನನ್ನು ಕಡಿದು ಬಿಡಬೇಡ. ರಾಜನು ನ್ಯಾಯವಿಚಾರಣೆ ಮಾಡುವ ಸಂದರ್ಭವನ್ನು ಕೊಡು. ಅವನ ತೀರ್ಪಿನಂತೆಯೇ ಯುವರಾಜನು ಶಿಕ್ಷೆ ಅನುಭವಿಸುವಂತೆ ಮಾಡು. ಹಾಗಾದರೇನೇ ನನಗೆ ತೃಪ್ತಿ" ಎಂದು ಹೆಂಡತಿಯೊಡನೆ ಹೇಳಿ ಪ್ರಾಣ ಬಿಟ್ಟನು. ನಾಗಿಣಿ ಆ ದಿನ ರಾತ್ರಿ ಕೋಟೆಯೊಳಗೆ ತೂರಿ ರಾಜಭವನದೊಳಗೆ ಹೊಕ್ಕು ಯುವರಾಜನ ಶಯ್ಯಾಗಾರವನ್ನು ಸೇರಿದಳು. ಆ ನಾಗಿಣಿ ಗಾಢ ನಿದ್ದೆಯಲ್ಲಿರುವ ಯುವರಾಜನ ಕಂಠವನ್ನು ಸುತ್ತಿಕೊಂಡ ಕೂಡಲೇ ರಾಜಕುಮಾರನು ಎಚ್ಚರಕ್ಕೆ ಬಂದು, ಹೆದರಿ ಸಹಾಯಕ್ಕಾಗಿ ಕೆಟ್ಟದನಿಯಿಂದ ಕೂಗಿದನು.

ಅವನ ಕೂಗನ್ನು ಕೇಳಿ ದಾಸದಾಸಿಯರೆಲ್ಲಾ ಅಲ್ಲಿಗೆ ಓಡಿಬಂದರು. ಯಾರಿಗೂ ಆ ನಾಗಿಣಿಯನ್ನು ಕೊಲ್ಲುವುದು ಹೇಗೆಂದು ಗೊತ್ತಾಗಲಿಲ್ಲ. ಯುವರಾಜನ ಕಂಠವನ್ನು ಬಿಗಿಯಾಗಿ ಸುತ್ತಿಕೊಂಡಿರುವ ಆ ಸರ್ಪವನ್ನು ಹೊಡೆಯಬೇಕಾದರೆ ರಾಜಕುಮಾರನಿಗೂ ಪೆಟ್ಟು ಬೀಳುವ ಹಾಗಿದೆ. ಅಂತಹ ಸ್ಥಿತಿಯಲ್ಲಿ ಏನು ಮಾಡುವುದೆಂದು ತೋರದೆ ಎಲ್ಲರೂ ಗಾಬರಿಯಾಗಿ ಚಡಪಡಿಸಿಕೊಂಡಿದ್ದರು. ಇಷ್ಟರೊಳಗೆ ಯಾವಾಗಲೋ ರಾಜಕುಮಾರನನ್ನು ಕಡಿದು ಓಡಿಹೋಗ ಬೇಕಾಗಿದ್ದ ಸರ್ಪ ಹೀಗೆ ಸುಮ್ಮನೆ ಸುತ್ತಿಕೊಂಡಿರುವುದೊಂದು ಆಶ್ಚರ್ಯವೂ ಅನಿಸಿತು.

ಅಷ್ಟರಲ್ಲಿ ನಾಗಿಣಿಯ ಬಾಯಿಯಿಂದ ಮಾತು ಹೊರಟಿತು. "ಮೊದಲು ನಿಮ್ಮ ರಾಜನನ್ನು ಕರೆದುಕೊಂಡು ಬನ್ನಿ. ನನಗೆ ನ್ಯಾಯವಿಚಾರಣೆ ನಡೆಯಬೇಕು. ಒಂದುವೇಳೆ ನಿಮ್ಮಲ್ಲಿ ಯಾವನಾದರೂ ನನ್ನನ್ನು ಕೊಲ್ಲಲು ನೋಡಿದರೆ, ಯುವರಾಜನನ್ನು ಕಡಿದುಕೊಲ್ಲುತ್ತೇನೆ, ಜಾಗ್ರತೆ !" ಸರ್ಪದ ಎಚ್ಚರಿಕೆಯ ಮಾತುಗಳನ್ನು ಕೇಳಿದ ಕೂಡಲೇ, ಕೆಲವರು ಮಿಂಚಿನ ವೇಗದಲ್ಲಿ ಓಡಿಹೋಗಿ ರಾಜನನ್ನು ಕರೆದುಕೊಂಡು ಬಂದರು.

ರಾಜನನ್ನು ನೋಡಿ ನಾಗಿಣಿ, ತನ್ನ ಗಂಡನ ಮರಣದ ಸಂಗತಿಯನ್ನು ರಾಜನೊಂದಿಗೆ ಹೇಳಿ, "ನನ್ನ ಗಂಡ ಯಾರಿಗೂ ಯಾವ ಕೇಡೂ ಮಾಡಲಿಲ್ಲ. ಅವನ ಪಾಡಿಗೆ ಹೋಗುತ್ತಿರುವಾಗ ಯುವರಾಜನು ಅನ್ಯಾಯವಾಗಿ ಅವನನ್ನು ಕೊಂದು

ನನಗೆ ವೈಧವ್ಯವನ್ನುಂಟುಮಾಡಿದನು. ಈ ರಾಜ್ಯದಲ್ಲಿರುವ ನ್ಯಾಯಸೂತ್ರದ ಪ್ರಕಾರ ನಾನು ಯುವರಾಜನನ್ನು ಕೊಂದು, ಇವನ ಹೆಂಡತಿಗೆ ವೈಧವ್ಯವನ್ನುಂಟುಮಾಡಲು ಬಂದಿದ್ದೇನೆ. ಆದರೆ ನಿನ್ನ ನ್ಯಾಯ ಸೂತ್ರದ ಪ್ರಕಾರವೇ ನಡೆಯಬೇಕೆಂದು ಗಂಡನು ಹೇಳಿದ್ದಾನೆ. ಆದಕ್ಕೆ ನಿನ್ನ ಸಮ್ಮತಿ ನನಗೆ ಬೇಕು " ಎಂದಳು ದೀನಳಾಗಿ.

ನಾಗಿಣಿ ಹೇಳಿದ ಮಾತನ್ನು ಕೇಳಿ ರಾಜನು ತುಂಬಾ ವ್ಯಾಕುಲಗೊಂಡನು. ನ್ಯಾಯಸೂತ್ರದ ಪ್ರಕಾರ ಅನ್ಯಾಯವಾಗಿ ನಾಗರಹಾವನ್ನು ಕೊಂದು ಇವಳಿಗೆ ವೈಧವ್ಯವನ್ನುಂಟುಮಾಡಿದ ಯುವರಾಜನು ಶಿಕ್ಷಾರ್ಹನೆಂಬುದು ನಿಜವೇ. ಆದರೆ ಆತನು ತನಗಿರುವ ಏಕಮಾತ್ರ ಪುತ್ರ! ಅವನಿಲ್ಲದಿದ್ದರೆ ರಾಜ್ಯಕ್ಕೆ ಭವಿಷ್ಯವೇ ಇಲ್ಲದೆ ಎಲ್ಲವೂ ಶೂನ್ಯವಾಗುತ್ತದೆ.

ಏನು ಹೇಳಲಿಕ್ಕೂ ತೋರದ ರಾಜನು ನ್ಯಾಯ ಸೂಕ್ಷ್ಮಗಳನ್ನು ತಿಳಿಸಬಲ್ಲ ಇಬ್ಬರು ನ್ಯಾಯಮೂರ್ತಿಗಳನ್ನು ಕರೆಯಿಸಿಕೊಂಡನು. ಅವರು ಕೂಡಾ ನಾಗಿಣಿ ಹೇಳುವುದನ್ನೆಲ್ಲಾ ಕೇಳಿದರು. ತರುವಾಯ ಒಬ್ಬ ನ್ಯಾಯಮೂರ್ತಿ ಹೀಗೆಂದನು :

"ಮಹಾರಾಜರೆ, ಕಣ್ಣಿಗೆ ಕಣ್ಣು. ಹಲ್ಲಿಗೆ ಹಲ್ಲು. ಕತ್ತಿಗೆ ಕತ್ತಿ ಎಂಬ ನಮ್ಮ ನ್ಯಾಯಸೂತ್ರವು ಎಲ್ಲರಿಗೂ ಗೊತ್ತಿರುವಂಥಾದ್ದೇ. ಆದುದರಿಂದ ಯುವರಾಜನಿಂದ ದುರ್ಮರಣಕ್ಕೀಡಾದ ನಾಗನೇ, ತನ್ನ ಹೆಂಡತಿಗೆ ಉಂಟಾದ ವೈಧವ್ಯದ ಕಷ್ಟವನ್ನು ಯುವರಾಣಿಗೆ ಕೂಡಾ ಉಂಟುಮಾಡಬಹುದು !"

ಈ ತೀರ್ಪನ್ನು ಕೇಳಿ ನಾಗಿಣಿ ತನಗೆ ಒಪ್ಪಿಗೆ ಇಲ್ಲವೆಂಬಂತೆ ತಲೆಯಾಡಿಸಿ, "ಇದು ಯಾವ ನ್ಯಾಯಶಾಸ್ತ್ರವೂ ಒಪ್ಪಲು ಸಾಧ್ಯವಿಲ್ಲದಂತಹ ತೀರ್ಪು. ಕೇವಲ ನನ್ನನ್ನು ಮೋಸಪಡಿಸಲಿಕ್ಕಾಗಿ ಈ ನ್ಯಾಯಮೂರ್ತಿಗಳು ಪ್ರಯತ್ನಪಡುತ್ತಿದ್ದಾರೆ. ಸತ್ತುಹೋದ ನನ್ನ ಗಂಡ ಯಾವ ವಿಧವಾಗಿ ಯುವರಾಜನಹೆಂಡತಿಗೆ ವೈಧವ್ಯವನ್ನು ತರಬಲ್ಲನು?"



ನಾಗಿಣಿಯ ಮಾತಿಗೆ ಏನು ಹೇಳಲಿಕ್ಕೂ ಆ ನ್ಯಾಯಮೂರ್ತಿಗೆ ತೋರಲಿಲ್ಲ. ಆಗ ಎರಡನೇ ನ್ಯಾಯಮೂರ್ತಿ ಹೀಗೆಂದನು : "ಈ ನಾಗಿಣಿಯಮ್ಮ ಹೇಳಿದ ಮಾತಿನಲ್ಲಿ ತಪ್ಪೇನೂ ಇಲ್ಲ. ಆದರೂ ಇಲ್ಲಿ ಒಂದು ಧರ್ಮಸಂದೇಹ ಬರುತ್ತದೆ" ಎಂದು ಹೇಳಿ, "ನಾಗಿಣಿಯಮ್ಮಾ, ನಿನಗೆ ಸಂತಾನ ಎಷ್ಟಿವೆ ?" ಎಂದು ಕೇಳಿದನು.

"ನನಗೆ ಐದುಮಂದಿ ಗಂಡು ಮಕ್ಕಳಿದ್ದಾರೆ !" ಎಂದಳು ನಾಗಿಣಿ.

"ಹಾಗೇನು ಪಾಪ ! ಯುವರಾಜನು ನಿನ್ನನ್ನು ಐವರು ಪುತ್ರರಿರುವ ವಿತಂತುವಾಗಿ ಮಾಡಿದ ನೆಂದಾಯಿತು. ಆದುದರಿಂದ ನೀನು ಕೂಡಾ ಅವನ ಹೆಂಡತಿಯನ್ನು ಐವರು ಪುತ್ರರಿರುವ ವಿತಂತುವಾಗಿಯೇ ಮಾಡಬೇಕು. ಹಾಗೆ ಮಾಡಿದ ರೇನೇ ನ್ಯಾಯಸೂತ್ರವನ್ನು ಅನುಸರಿಸಿ ಶಿಕ್ಷೆ ನೀಡಿದಂತಾಗುತ್ತದೆ. ಹೌದಷ್ಟೆ ?" ಎಂದು ನಾಗಿಣಿಯನ್ನು ನೋಡಿದನು.

"ಹೌದು ! ಹೌದು !" ಎಂದಳು ನಾಗಿಣಿ.

ಆಗ ಆ ನ್ಯಾಯ ಮೂರ್ತಿ ಮತ್ತೆ ಹೀಗೆಂದನು : "ಆದುದರಿಂದ ನೀನು ಸ್ವಲ್ಪ ಕಾಲ ಕಾದಿರ ಬೇಕಾಗುತ್ತದೆ. ಈಗ ಯುವರಾಣಿಗೆ ಇಬ್ಬರೇ ಪುತ್ರರು. ಅವಳು ಕೂಡಾ ಐದು ಪುತ್ರರ ತಾಯಿಯಾದ ಮೇಲೆ, ನೀನು ಯಾವ ಅಭ್ಯಂತರವೂ ಇಲ್ಲದೆ ಯುವರಾಜನ ಮೇಲೆ ಹಗೆತೀರಿಸಿಕೊಳ್ಳ ಬಹುದು."

ಈ ಸೂತ್ರವು ನ್ಯಾಯಸೂತ್ರಕ್ಕೆ ಅನುಗುಣ ವಾಗಿಯೇ ಇರುವುದೆಂದು ನಾಗಿಣಿ ಒಪ್ಪಿತೀರಲೇ ಬೇಕಾಯಿತು. ಆದುದರಿಂದ ಅವಳು ರಾಜನೊಡನೆ ಒಂದು ಕೋರಿಕೆಯನ್ನು ಹೇಳಿದಳು. ತಾನೂ ಆಗಾಗ ಗಮನಿಸಿಕೊಂಡಿರುವೆನೆಂದೂ, ತನಗೆ ತಿಳಿಯದಂತೆ ಐದನೇ ಮಗು ಹುಟ್ಟಿದ ಕೂಡಲೇ ತನ್ನ ಹುತ್ತದ ಮನೆಗೆ ಸುದ್ದಿ ತಿಳಿಸಿ ಬಿಡಬೇಕೆಂದೂ ಹೇಳಿದಳು.

ನ್ಯಾಯಶೀಲನಾದ ರಾಜನು ಅದಕ್ಕೆ ಒಪ್ಪಿದನು. ನಾಗಿಣಿ ಹೊರಟುಹೋದಳು. ಆಮೇಲೆ ಯುವ ರಾಜನಿಗೆ ಮಕ್ಕಳೇ ಹುಟ್ಟಲಿಲ್ಲ. ನಾಗಿಣಿ ಮಾತ್ರ ಆ ದಂಪತಿಗಳು ಉದ್ಯಾನವನಕ್ಕೆ ಬಂದಾಗಲೆಲ್ಲಾ ತನ್ನ ಹುತ್ತದಿಂದ ತಲೆಯೆತ್ತಿ ಅವರನ್ನು ನೋಡುತ್ತಿತ್ತು.

ಎಷ್ಟು ಕಾಲ ಕಳೆದರೂ ಯುವರಾಜ ದಂಪತಿ ಗಳೊಂದಿಗೆ ಇಬ್ಬರು ಮಕ್ಕಳಿಗಿಂತ ಹೆಚ್ಚು ಕಾಣಲೇ ಇಲ್ಲ. ಇನ್ನು ತನ್ನ ಹಗೆ ತೀರುವುದು ಹೇಗೆ ? ಎಂಬ ಪ್ರಶ್ನೆಯನ್ನು ಇಟ್ಟುಕೊಂಡೇ ಆ ನಾಗಿಣಿ ಒಂದುದಿನ ತೀರಿಹೋದಳು.





# ಜ್ಞಾತಿವೈರ

**ಪೂ**ರ್ವಕಾಲದಲ್ಲಿ ಕಾಶೀರಾಜ್ಯವನ್ನು ಪಾಲಿಸಿದ ಬ್ರಹ್ಮದತ್ತ ರಾಜನಿಗೆ ನೂರುಮಂದಿ ಕುಮಾರರಿದ್ದರು. ಎಲ್ಲರಿಗಿಂತಲೂ ಚಿಕ್ಕ ಕುಮಾರನ ಹೆಸರು ಸಂವರ. ರಾಜನು ತನ್ನ ಒಬ್ಬೊಬ್ಬ ಮಗನಿಗೂ ಒಬ್ಬೊಬ್ಬ ಗುರುವನ್ನು ಗೊತ್ತುಪಡಿಸಿದನು. ಚಿಕ್ಕವನಾದ ಸಂವರನ ಗುರು ಬೋಧಿಸತ್ವನ ಅವತಾರದವನೇ.

ಮಹಾಜ್ಞಾನಿಯಾದ ಬೋಧಿಸತ್ವನು ಸಂವರನಿಗೆ ಬಹಳಕಾಲ ವಿದ್ಯಾಭ್ಯಾಸ ಮಾಡಿಸಿದನು. ಎಲ್ಲಾ ವಿದ್ಯೆಗಳಲ್ಲಿಯೂ ಸಂವರನು ತೇರ್ಗಡೆ ಹೊಂದಿದನು. ಆದುದರಿಂದ ಅವನಲ್ಲಿ ಗರ್ವ ಲವಲೇಶವೂ ಇರಲಿಲ್ಲ.

ಉಳಿದ ತೊಂಬತ್ತೊಂಬತ್ತು ರಾಜಕುಮಾರರ ಗುರುಗಳೂ ತಮ್ಮ ಶಿಷ್ಯರನ್ನು ರಾಜನ ಬಳಿಗೆ ಕರೆದುಕೊಂಡು ಹೋಗಿ, ರಾಜನಿಂದ ಭಾರಿ ಭಾರಿ ಸನ್ಮಾನಗಳನ್ನು ಪಡೆದು ಹಿಂದಿರುಗಿದರು.

ಆಮೇಲೆ ರಾಜನು ತನ್ನ ಕುಮಾರರನ್ನು ರಾಜ್ಯದೊಳಗಿನ ಒಂದೊಂದು ಪ್ರಾಂತಕ್ಕೆ ಪಾಲಕರನ್ನಾಗಿ ನಿಯಮಿಸಿ, ಅವರನ್ನೆಲ್ಲಾ ರಾಜಧಾನೀ ನಗರದಿಂದ ಕಳುಹಿಸಿದನು. ಈ ಸಮಾಚಾರವನ್ನು ತಿಳಿದು, ಇನ್ನೂ ಗುರ್ವಾಶ್ರಮದಲ್ಲೇ ಇದ್ದ ಸಂವರ ಕುಮಾರನು ತನ್ನ ಗುರುವನ್ನು ನೋಡಿ, "ನನ್ನ ತಂದೆ ನನ್ನ ಅಣ್ಣಂದಿರ ಹಾಗೆಯೇ ನನಗೂ ರಾಜ್ಯದೊಳಗಿನ ಒಂದು ಪ್ರಾಂತವನ್ನು ಕೊಟ್ಟರೆ ನಾನೇನು ಮಾಡಬೇಕು ?" ಎಂದು ಕೇಳಿದನು.

ಶಿಷ್ಯನ ಪ್ರಶ್ನೆಗೆ ಬೋಧಿಸತ್ವನು, "ನಿನ್ನ ತಂದೆ ಒಂದು ವೇಳೆ ನಿನಗೆ ರಾಜ್ಯವನ್ನು ಕೊಟ್ಟು ಕಳುಹಿಸಲು ನೋಡಿದರೆ ಅದಕ್ಕೆ ನೀನು ಒಪ್ಪಿಕೊಳ್ಳಬಾರದು. ನಿನ್ನ ಅಣ್ಣಂದಿರೆಲ್ಲಾ ತಂದೆಯನ್ನು ಬಿಟ್ಟು ಒಂದೊಂದು ಪ್ರಾಂತದ ಪಾಲಕರಾಗಿ ಹೊರಟು ಹೋದರು. ವೃದ್ಧಾಪ್ಯದಲ್ಲಿ ತಂದೆಯನ್ನು ನೋಡಿಕೊಂಡಿರುವ ಪುತ್ರನ ಕರ್ತವ್ಯವು ನಿನ್ನದಾಗಿದೆ" ಎಂದನು. ಹೀಗಿರಲು ತನ್ನ ಚಿಕ್ಕಮಗನ ವಿದ್ಯಾಭ್ಯಾಸವು ಎಷ್ಟರ ಮಟ್ಟಿಗೆ ಬಂದಿದೆ ಎಂಬುದನ್ನು ತಿಳಿಯಲು ಬ್ರಹ್ಮದತ್ತ ರಾಜನು ಗುರುವಿನ ಆಶ್ರಮಕ್ಕೆ ಬಂದನು. ಸಂವರನು ತಂದೆಗೆ ನಮಸ್ಕಾರಮಾಡಿ, ಗುರುವಿನ ಪಕ್ಕದಲ್ಲಿ ನಿಂತನು. ರಾಜನು ಮಗನನ್ನು ನೋಡಿ "ಕಂದಾ, ನಿನ್ನ ವಿದ್ಯೆ ಪೂರ್ತಿಯಾಯಿತೆ?" ಎಂದು ಕೇಳಿದನು.



“ಗುರುಗಳ ದಯದಿಂದ ಎಲ್ಲಾ ವಿದ್ಯೆಗಳನ್ನೂ ಕಲಿತುಕೊಂಡಿದ್ದೇನೆ, ಅಪ್ಪಾ” ಎಂದನು ಸಂವರ.

“ಹಾಗಿದ್ದರೆ ನಿನಗೆ ಪರಿಪಾಲಿಸಲು ರಾಜ್ಯದಲ್ಲಿ ಇಷ್ಟವಾದ ಪ್ರಾಂತವನ್ನು ಹೇಳು. ಅದನ್ನು ನಿನಗೆ ಕೊಡುತ್ತೇನೆ.” ಎಂದನು ರಾಜ.

“ಅಪ್ಪಾ, ನಾನು ನಿಮ್ಮ ಮಗಂದಿರಲ್ಲಿ ಕಡೆಯವನು. ಎಲ್ಲಾ ಅಣ್ಣಂದಿರೂ ನಿಮ್ಮನ್ನು ಬಿಟ್ಟು ಒಂದೊಂದು ಪ್ರಾಂತವನ್ನು ಪಾಲಿಸಿ ಕೊಂಡಿದ್ದಾರೆ. ನಾನು ಕೂಡಾ ನಿಮ್ಮನ್ನು ಬಿಟ್ಟು ಹೋಗಿ ಬಿಟ್ಟರೆ ನಿಮ್ಮನ್ನು ನೋಡಿಕೊಳ್ಳುವವರು ಯಾರು? ನನಗೆ ರಾಜ್ಯದಿಂದ ಯಾವ ಉಪ ಯೋಗವೂ ಇಲ್ಲ. ನಾನು ನಿಮ್ಮ ಸೇವೆ ಮಾಡಿ ಕೊಂಡಿರುವುದನ್ನೇ ಇಷ್ಟಪಡುತ್ತೇನೆ” ಎಂದನು ಸಂವರ. ಅವನ ಮಾತು ಕೇಳಿ ರಾಜನು ಬಹಳ ಸಂತೋಷಪಟ್ಟನು. ಅದರಂತೆ ಸಂವರ ಕುಮಾರನು ತಂದೆಯೊಂದಿಗೇ ಇರತೊಡಗಿದನು. ಅಗತ್ಯವಿದ್ದಾಗ ಗುರು ಬೋಧಿಸತ್ವನ ಬಳಿಗೆ ಹೋಗಿ ಆಲೋಚನೆ ಕೇಳಿಕೊಂಡೂ ಇದ್ದನು.

ಒಂದುಸಾರಿ ಸಂವರ ಕುಮಾರನು ಬೋಧಿಸತ್ವನ ಸಲಹೆಯಂತೆ ರಾಜಧಾನಿಯ ಸಮೀಪದಲ್ಲಿದ್ದ ಒಂದು ಬಂಜರು ಭೂಮಿಯನ್ನು ಒಳ್ಳೆಯದು ಮಾಡಿಸಿ, ಅಲ್ಲಿ ಹೂವಿನ ಗಿಡಗಳನ್ನೂ, ಫಲವೃಕ್ಷ ಗಳನ್ನೂ ಬೆಳೆಯಿಸಿ, ಅದನ್ನೊಂದು ಸುಂದರ ಉದ್ಯಾನವನ್ನಾಗಿ ಮಾಡಿಸಿದನು. ಆ ಉದ್ಯಾನ ವನಕ್ಕೆ ಪುರಪ್ರಮುಖರು ಬಂದು ವಿಹರಿಸುವರು, ವಿನೋದಿಸಿ ನೂತನೋತ್ಸಾಹ ಪಡೆಯುವರು. ಅವರೊಂದಿಗೆ ಸಂವರ ಕುಮಾರನಿಗೆ ತುಂಬಾ ಪರಿಚಯವಾಯಿತು.

ಮತ್ತೊಂದುಸಾರಿ ಸಂವರನು ತಂದೆಯ ಅನುಮತಿ ಪಡೆದು ನಗರದೊಳಗಿನ ಎಲ್ಲಾ ವರ್ಣದ ವರಿಗೂ ಸಂತರ್ಪಣೆ ಮಾಡಿಸಿದನು. ಆಮೇಲೆ ರಾಜಾಶ್ರಿತರಿಗೂ, ರಾಜ್ಯದ ಕಾಲ್ಬಲ, ಅಶ್ವದಳ ಸೈನಿಕರಿಗೂ ದೊಡ್ಡದೊಂದು ಔತಣ ಮಾಡಿಸಿ ಸಂತೋಷಪಡಿಸಿದನು. ವಿದೇಶಗಳಿಂದ ಬರುವ ರಾಯಭಾರಿಗಳಿಗೂ ವರ್ತಕರಿಗೂ ಸೌಕರ್ಯ ಗಳಾಗುವಂತೆ ಸುಂದರ ಅಲಂಕಾರಗಳಿಂದ ಕೂಡಿದ ಭವನಗಳನ್ನು ಕಟ್ಟಿಸಿದನು. ಇವೇ ಮೊದಲಾದ ಕಾರ್ಯಗಳಿಂದಾಗಿ ಸಂವರ ಕುಮಾರನ ಹೆಸರು ರಾಜ್ಯದೊಳಗೆಲ್ಲಾ ಬಹಳ ಪ್ರಸಿದ್ಧಿಯಾಯಿತು.

ಹೀಗೆ ಕಾಲ ಕಳೆಯುತ್ತಿರಲು ತುಂಬಾ ವೃದ್ಧನಾಗಿ ಹೋದ ರಾಜನಿಗೆ ಅವಸಾಲಕಾಲವು ಸಮೀಪಿಸಿತು. ಕಟ್ಟಕಡೆಗೆ ರಾಜನು ಮಂತ್ರಿಗಳನ್ನು ಕರೆಯಿಸಿ, “ನನ್ನ ಅನಂತರ ನನ್ನ ನೂರು ಜನ ಪುತ್ರರಲ್ಲಿ ಯಾರಿಗೂ ಸಿಂಹಾಸನದಲ್ಲಿ ಕುಳಿತು ಕೊಳ್ಳುವುದಕ್ಕೆ ಹಕ್ಕಿದೆ. ನೀವು ಚೆನ್ನಾಗಿ ಆಲೋಚಿಸಿ ಅರ್ಹನಾದವನಿಗೆ ಪಟ್ಟ ಕಟ್ಟಿರಿ” ಎಂದನು. ಮುಂದೆ ರಾಜನು ಸತ್ತುಹೋದ ಮೇಲೆ ಮಂತ್ರಿ

ಗಳೆಲ್ಲರೂ ಚರ್ಚೆಮಾಡಿಕೊಂಡು, ಸಿಂಹಾಸನದಲ್ಲಿ ಕುಳಿತುಕೊಳ್ಳುವ ಅರ್ಹತೆ ಸಂವರನಿಗೇ ಸರಿ ಎಂದು ನಿರ್ಣಯಿಸಿ, ಅವನಿಗೇ ವೈಭವವಾಗಿ ರಾಜ್ಯಾಭಿಷೇಕ ಮಾಡಿದರು.

ಅಂದಿನಿಂದ ಸಂವರನು ತನ್ನ ಗುರುವಾದ ಬೋಧಿಸತ್ವನ ಆಲೋಚನೆಗಳನ್ನು ಕೇಳುತ್ತ ನ್ಯಾಯ ಮಾರ್ಗದಲ್ಲಿ ಪ್ರಜೆಗಳಿಗೆಲ್ಲಾ ಹಿತವಾಗುವಂತೆ ರಾಜ್ಯಪಾಲನೆ ಮಾಡತೊಡಗಿದನು.

ತಮ್ಮ ತಂದೆಯ ಅನಂತರ ಸಂವರನು ಪಟ್ಟಾಭಿಷಿಕ್ತನಾದುದರಿಂದ ಉಳಿದ ತೊಂಬತ್ತೊಂಬತ್ತು ಮಂದಿ ರಾಜಕುಮಾರರಿಗೆ ಕೋಪವಾಗಿತ್ತು. ಅವರೆಲ್ಲರೂ ಪರಸ್ಪರ ಮಾತಾಡಿಕೊಂಡು ಒಂದಾಗಿ ಒಬ್ಬ ದೂತನ ಮೂಲಕ ಕಾಶೀರಾಜ್ಯದ ಸಿಂಹಾಸನವನ್ನು ಬಿಟ್ಟುಕೊಡಬೇಕೆಂದೂ, ಇಲ್ಲದಿದ್ದರೆ ಯುದ್ಧಕ್ಕೆ ತಯಾರಾಗಬೇಕೆಂದೂ ಎಚ್ಚರಿಕೆ ಕಳುಹಿಸಿದರು. ಆ ದೂತನ ಬೆನ್ನಿಗೇ ಸೈನ್ಯಗಳೊಂದಿಗೆ ಬಂದು ಕೋಟೆಯನ್ನು ಮುತ್ತಿಯೂ ಬಿಟ್ಟರು. ಸಂವರನು ಈ ಸಂಗತಿಯನ್ನೆಲ್ಲಾ ಗುರುವಾದ ಬೋಧಿಸತ್ವನ ಬಳಿಗೆ ಹೋಗಿ ಹೇಳಿ ಏನು ಮಾಡಬೇಕೆಂದು ಕೇಳಿದನು. ಬೋಧಿಸತ್ವನು ಅವನೊಂದಿಗೆ, "ಸೋದರರೊಂದಿಗೆ ಜಗಳ ಮಾಡುವುದು ಮಹಾ ಪಾಪ. ಆದುದರಿಂದ ನಿನ್ನ ತಂದೆಯ ಆಸ್ತಿಯನ್ನು ನೂರು ಭಾಗಗಳಾಗಿ ಮಾಡಿ, ನಿನ್ನ ಎಲ್ಲಾ ಅಣ್ಣಂದಿರಿಗೂ ಹಂಚಿಕೊಟ್ಟು ನೀನೂ ಒಂದು ಭಾಗ ಇಟ್ಟುಕೋ." ಎಂದನು.

ಸಂವರನು ಹಾಗೆಯೇ ಮಾಡಿದನು. ಸಂವರನ ಈ ಲೆಕ್ಕಾಚಾರದ ವಿನಿಯೋಗ ಕ್ರಮವನ್ನು ತಿಳಿದು ಸೋದರರಲ್ಲಿ ಹಿರಿಯವನಾದ ಉಪೋಸತುವಿಗೆ ತುಂಬಾ ಆಶ್ಚರ್ಯವಾಯಿತು. ಅವನು ತನ್ನ ತಮ್ಮಂದಿರೊಂದಿಗೆ, "ನಾವೆಲ್ಲಾ ತಿಳಿದ ಹಾಗೆ ನಮ್ಮ ಚಿಕ್ಕತಮ್ಮ ಸಂವರನಿಲ್ಲ. ಅವನು ಸಿಂಹಾಸನದಲ್ಲಿರುವುದರಿಂದ ನಮಗೆ ಶತ್ರುವಾದನೆಂದು ಭಾವಿಸಿದೆವು. ದಾಳಿಮಾಡಿ ಅವನನ್ನು ಓಡಿಸಲು ಬಂದೆವು. ಈಗ ಅವನು ನ್ಯಾಯವಾಗಿ ಪ್ರವರ್ತಿಸುವುದರಿಂದ, ಪ್ರಜೆಗಳಿಂದಲೂ ಮೆಚ್ಚುಗೆ ಪಡೆದಿದ್ದಾನೆ. ಪ್ರಜೆಗಳಾರೂ ನಮ್ಮನ್ನು ಸಂತೋಷದಿಂದ ಸ್ವಾಗತಿಸುವುದೂ ಇಲ್ಲ. ಇಂಥವನೊಂದಿಗೆ ನಾವು ಯುದ್ಧ ಮಾಡುವುದು ಹೇಗೆ ?" ಎಂದನು.



"ಹಾಗಾದರೆ ನಾವೀಗ ಮಾಡಬೇಕಾದರೂ ಏನು ?" ಎಂದು ಒಬ್ಬ ತಮ್ಮನು ಕೇಳಿದನು.

"ನಾವು ಒಳ್ಳೆಯದರಲ್ಲಿ ತಮ್ಮನೊಂದಿಗೆ ರಾಜೀ ಮಾಡಿಕೊಳ್ಳುವುದೇ ಉತ್ತಮ ಮಾರ್ಗವೆಂದು ನನಗೆ ತೋರುತ್ತದೆ. ತಂದೆಯ ಸಿಂಹಾಸನಕ್ಕೆ ನಾವೆಲ್ಲರೂ ಹಕ್ಕುದಾರರೆಂಬುದು ನಿಜವೇ. ಆದರೆ ಎಲ್ಲರೂ ಒಂದೇ ಸಿಂಹಾಸನವನ್ನು ಏರಿಕೊಳ್ಳಲು ಸಾಧ್ಯವಿಲ್ಲವಷ್ಟೆ ? ಆದುದರಿಂದ ಸಂವರನನ್ನೇ ರಾಜನಾಗಿರುವಂತೆ ಒಪ್ಪಿಕೊಂಡು, ನಮಗೆ ಬಂದ

ರಾಜ್ಯಭಾಗಗಳನ್ನು ಮತ್ತೆ ಅವನ ಪರಮಾಡಿ ಬಿಡುವುದು ನ್ಯಾಯವೆಂದು ಕಾಣುತ್ತದೆ. ಆಗ ತಂದೆಯ ಸಿಂಹಾಸನದ ಸಾರ್ವಭೌಮತ್ವಕ್ಕೆ ಕುಂದು ಬರುವುದಿಲ್ಲ." ಎಂದನು ಉಪೋಸತು.

ದೊಡ್ಡಣ್ಣನ ಮಾತಿಗೆ ಎಲ್ಲಾ ತಮ್ಮಂದಿರೂ ಸಮ್ಮತಿ ತಿಳಿಸಿದರು. ಕೂಡಲೇ ಅವರೆಲ್ಲರೂ ತಮ್ಮ ಸೇನೆಗಳನ್ನು "ಸಂವರನಿಗೆ ಜಯವಾಗಲಿ !" ಎಂಬ ಘೋಷಕ್ಕೆ ಬದಲಾಯಿಸಿ, ನಗರವನ್ನು ಪ್ರವೇಶಿಸಿದರು. ಸಿಂಹಾಸನಾರೂಢನಾಗಿದ್ದ ಸಂವರನು ಅಣ್ಣಂದಿರಿಗೆಲ್ಲಾ ಸ್ವಾಗತ ಹೇಳಿ, ಅವರನ್ನು ಉಚಿತಾಸನಗಳಲ್ಲಿ ಕೂಡಿಸಿ ಗೌರವಪಡಿಸಿ ಉಪಚಾರಗಳನ್ನು ಮಾಡಿದನು.

ಉಪೋಸತು ಸಂವರನೊಂದಿಗೆ, "ತಮ್ಮಾ, ನಿನ್ನ ಧರ್ಮ ಗುಣವನ್ನು ಸಾವಿರ ಬಾಯಿಗಳಿಂದ ಹೊಗಳಬಹುದು. ಹೀಗೆ ಎಲ್ಲರೊಂದಿಗೂ ಒಳಿತಾಗಿ ನಡೆಯುವಂಥ ಶಕ್ತಿ ನಿನಗೆ ಹೇಗೆ ಬಂತು ?" ಎಂದು ಕೇಳಿದನು.

"ಅಣ್ಣಾ ! ನೀನು ನನ್ನಲ್ಲಿ ಕಾಣುವ ಆ ಶಕ್ತಿ ಬಹುಶಃ ಇತರ ಮಾನವರನ್ನು ದ್ವೇಷಿಸಬಾರದೆಂಬ ಕಾರಣವೇ ಆಗಿರಬೇಕು. ಇನ್ನು ರಾಜ್ಯಪಾಲನೆಯ ವಿಷಯದಲ್ಲಿ, ಉದ್ಯೋಗಸ್ಥರಿಗೂ, ಸೈನಿಕಾದಿ ಎಲ್ಲಾ ಪರಿವಾರಗಳಿಗೂ ಆಗಿಂದಾಗಲೇ ಸಂಬಳವನ್ನು ಪೂರ್ತಿಯಾಗಿ ಕೊಡಿಸಿ ಬಿಡುತ್ತೇನೆ. ನಮ್ಮ ರಾಜ್ಯಕ್ಕೆ ಬರುವ ರಾಯಭಾರಿಗಳನ್ನೂ, ವರ್ತಕರನ್ನೂ ತಕ್ಕ ರೀತಿಯಲ್ಲಿ ಗೌರವಿಸುತ್ತೇನೆ. ಪ್ರಜೆಗಳ ಕ್ಷೇಮವೇ ನನ್ನ ಕ್ಷೇಮವಾಗಿ ಭಾವಿಸುತ್ತೇನೆ." ಎಂದನು ಸಂವರ ಕುಮಾರ.

ಅದನ್ನು ಕೇಳಿ ಉಪೋಸತು ಉಳಿದ ತನ್ನ ತಮ್ಮಂದಿರೆಲ್ಲರ ಪಕ್ಷವಾಗಿ ಸಂವರನನ್ನು ಹರಸಿ, "ಇದೇ ವಿಧವಾಗಿ ಧರ್ಮಮಾರ್ಗದಿಂದ ರಾಜ್ಯ ಪಾಲನೆ ಮಾಡುತ್ತ ಕೀರ್ತಿಶಾಲಿಯಾಗು. ನಿನ್ನ ಅಣ್ಣಂದಿರಾದ ನಾವೆಲ್ಲರೂ ನಿನಗೆ ಸಹಾಯಕರಾಗಿರುತ್ತ, ಶತ್ರು ಭಯವಿಲ್ಲದಂತೆ ನೋಡಿಕೊಳ್ಳುತ್ತೇವೆ. ಈ ಭೂಲೋಕದಲ್ಲೇ ನೀನು ದೇವೇಂದ್ರನ ಹಾಗಿರು. ನಮಗೆಲ್ಲಾ ತುಂಬಾ ಸಂತೋಷವಾಗಿದೆ. ನೀನು ನಮ್ಮ ಸಣ್ಣ ತಮ್ಮನಾದರೂ ನೀನು ಕಲಿತ ವಿದ್ಯೆ ಬಹಳ ದೊಡ್ಡದು" ಎಂದನು.

ಬೋಧಿಸತ್ವನ ಶಿಷ್ಯನಾದ ಸಂವರನು ಈ ವಿಧವಾಗಿ ಅಣ್ಣಂದಿರ ಜ್ಞಾತಿವೈರವನ್ನು ಅಳಿಸಿ ಹಾಕಿ, ಪ್ರೇಮಾದರಗಳಿಗೆ ಪಾತ್ರನಾದನು. ಪ್ರಜೆಗಳಿಂದ ಗೌರವ ಮರ್ಯಾದೆಗಳನ್ನು ಹೊಂದುತ್ತ ಬಹಳ ಕಾಲದ ವರೆಗೆ ರಾಜಭಾರ ವಹಿಸಿಕೊಂಡಿದ್ದನು.






# ಸಾಹಸ ಯಾತ್ರೆ

ಕೌಂಡಿನ್ಯನೆಂಬ ಬ್ರಾಹ್ಮಣ ಯುವಕನಿಗೆ ತಲೆ ಮಾರುಗಳಿಂದ ಬಂದ ವೃತ್ತಿ ಪೌರೋಹಿತ್ಯ ವಾಗಿತ್ತು. ಅವನಿಗೆ ಪೌರೋಹಿತ್ಯದ ಅಂಗವಾದ ಪುರಾಣ ಪಠನಾದಿಗಳ ಮೇಲೆ ಸ್ವಲ್ಪವೂ ಆಸಕ್ತಿ ಇರಲಿಲ್ಲ. ತಂದೆ ಅತ್ಯಂತ ಶ್ರದ್ಧೆಯಿಂದ ಪುರಾಣ ಶ್ಲೋಕಗಳನ್ನು ಪಠಿಸಿಕೊಂಡಿದ್ದರೆ, ಮಗನು ಮೆತ್ತಗೆ ಮನೆಯಿಂದ ಹೊರಟು ಹೋಗಿ ಬಿಡುವನು.

ಕೌಂಡಿನ್ಯನು ಸಮುದ್ರ ತೀರದಲ್ಲಿ ಕುಳಿತು, ಅಪಾರವಾದ ಆ ಸಮುದ್ರದಾಚೆಗೆ ಏನಿರ ಬಹುದೆಂದು ಆಶ್ಚರ್ಯಪಡುವನು. ಆ ಪ್ರಶ್ನೆಗೆ ಉತ್ತರ ಪಡೆಯಬೇಕಾದರೆ ಸಾಹಸವಾದ ವೀರೋಚಿತವಾದುದೇನಾದರೂ ಮಾಡ ಬೇಕೆಂದು ತಪಿಸಿಕೊಳ್ಳುವನು.





ಒಂದು ದಿನ ರಾತ್ರಿ ಅವನು ಗಾಢನಿದ್ರೆಯಲ್ಲಿರು ವಾಗ ಸ್ವಪ್ನದಲ್ಲೊಂದು ಮಹಾರಣ್ಯವು ಕಂಡಿತು. ಅಲ್ಲೋಬ್ಬ ದಿವ್ಯ ಪುರುಷ, ಮಹಾ ಭಾರತದ ವೀರನಂಥವನು, ಬೆಟ್ಟದ ಗುಹೆಯಲ್ಲಿ ಒಂದು ಧನುಸ್ಸನ್ನಿಡುವುದನ್ನು ನೋಡಿದನು. ಆ ಕೂಡಲೇ ಕೌಂಡಿನ್ಯನಿಗೆ ಎಚ್ಚರವಾಯಿತು.



ಸೂರ್ಯೋದಯವಾದ. ಕೂಡಲೇ ಕೌಂಡಿನ್ಯನು ಅರಣ್ಯಕ್ಕೆ ಹೋಗಿ, ಸ್ವಪ್ನದಲ್ಲಿ ನೋಡಿದ ಬೆಟ್ಟದ ಗುಹೆಯನ್ನು ಗುರುತಿಸಿದನು. ನಿಃಶಬ್ದವಾಗಿ ಗುಹೆಯೊಳಗೆ ಪ್ರವೇಶಿಸಿದಾಗ, ಸ್ವಪ್ನದಲ್ಲಿ ಕಂಡಂತೆ ಅಲ್ಲಿರುವ ಧನುಸ್ಸನ್ನು ನೋಡಿ, ಆಶ್ಚರ್ಯಪಡುತ್ತ ಉತ್ಸಾಹಿತನಾದನು.

ಆ ಧನುಸ್ಸನ್ನು ಎತ್ತಿಕೊಂಡು ಬಂದು ಸ್ನೇಹಿತರ ಇದಿರಿನಲ್ಲಿ ತನ್ನ ಬಿಲ್ಲು ವಿದ್ಯೆಯ ಕೌಶಲವನ್ನು ಪ್ರದರ್ಶಿಸಿ, ಎಲ್ಲರನ್ನೂ ಆಶ್ಚರ್ಯ ಚಕಿತರನ್ನಾಗಿ ಮಾಡಿದನು. ಮಹಿಮೆಯುಳ್ಳ ಆ ಧನುಸ್ಸು ತನ್ನ ಕೈಯಲ್ಲಿರುವಾಗ, ತಾನು ಸಾಧಿಸಲಾಗದ ಕಾರ್ಯವಿರಲಾರದೆಂದು ಗಟ್ಟಿ ನಂಬುಗೆ ಅವನಿಗಾಯಿತು.





ಕೌಂಡಿನ್ಯನು ತನ್ನ ಮಿತ್ರರು ಕೆಲವರನ್ನು ಕರೆದುಕೊಂಡು, ಸಮುದ್ರ ತೀರದಲ್ಲಿ ಉಪಯೋಗವಿಲ್ಲದಂತೆ ಬಿದ್ದಿದ್ದ ಒಂದು ನಾವೆಯನ್ನು ಸರಿಗೊಳಿಸಿ, ಮಿತ್ರರೊಂದಿಗೆ ಅದರಲ್ಲಿ ಕುಳಿತು ಸಮುದ್ರದಲ್ಲಿ ಹೊರಟನು. ಎಲ್ಲಿಗೆಂಬ ಆಲೋಚನೆ ಯಾವುದೂ ಅವನಿಗಿರಲಿಲ್ಲ. ದಿನಗಳು ಗತಿಸುತ್ತಿದ್ದುವು.

ಕೆಲವು ದಿನಗಳ ಮೇಲೆ ಅವರಿಗೆ ತೆಂಗಿನ ಮರಗಳಿಂದ ತುಂಬಿದ ಒಂದು ಸಮುದ್ರ ತೀರವೂ, ಆ ಕಡೆಗೇ ಪ್ರಯಾಣಿಸುವ ಅಲಂಕೃತವಾದೊಂದು ನಾವೆಯೂ ಕಾಣಿಸಿದುವು. ಕೌಂಡಿನ್ಯನು ಬಿಲ್ಲಿಗೆ ಬಾಣ ಹೂಡಿ, ಆ ನಾವೆಯ ಮೇಲೆ ಹಾರುತ್ತಿದ್ದ ಜಾಂಡಾದ ಕಡೆಗೆ ಬಾಣ ಬಿಟ್ಟನು. ಜಾಂಡಾ ತುಂಡಾಗಿ ಕೆಳಗೆಬಿತ್ತು.





ಮರುಕ್ಷಣವೇ ನಾವೆಯಲ್ಲಿ ಗಲಿಬಿಲಿಯುಂಟಾಯಿತು. ಅನೇಕಮಂದಿ ಯುವತಿಯರು ನಾವೆಯಲ್ಲಿ ಎದ್ದು ನಿಂತರು. ಅವರಲ್ಲಿ ರಾಜಕುಮಾರಿಯಂತೆ ವಿಶೇಷ ಅಲಂಕಾರಗಳಿಂದ ಅತ್ಯಂದ ಸುಂದರಿಯಾದ ಯುವತಿಯೊಬ್ಬಳು ಕೌಂಡಿನ್ಯನ ಕಡೆಗೆ ಕೈಯಾಡಿಸುತ್ತಾ, ತನ್ನ ನಾವೆಯನ್ನು ಅನುಸರಿಸಿ ಬರುವಂತೆ ಸಂಜ್ಞೆ ತೋರಿಸಿದಳು.

ಕಾಂಬೋಜ ರಾಜ್ಯದ ತೀರ ಪ್ರಾಂತವದು. ತಂದೆಯು ಮರಣಾನಂತರ ಆ ರಾಜ್ಯಕ್ಕೆ ಆ ರಾಜಕುಮಾರಿಯೇ ಪರಿಪಾಲಕಳಾಗಿದ್ದಳು. ಕೌಂಡಿನ್ಯನನ್ನು ನೋಡಿದ ಕೂಡಲೇ ಅವನೇ ತನಗೆ ತಕ್ಕಗಂಡನೆಂದು ಅವಳು ನಿಶ್ಚಯಿಸಿಕೊಂಡಳು. ಕೌಂಡಿನ್ಯನು ಅವಳನ್ನು ವಿವಾಹವಾಗಿ ಕಾಂಬೋಜ ರಾಜ್ಯಕ್ಕೆ ರಾಜನಾದನು.





ಆ ಕಾಲದ ಕಾಂಬೋಜವು ತರುವಾಯ ಕಂಬೋಡಿಯಾ ಎಂದು ಬದಲಾಗಿ ಈಗ ಕಂಪೂಚಿಯಾ ಎಸೆಸಿ ವ್ಯವಹರಿಸಲ್ಪಡುತ್ತಿದೆ. ಕೌಂಡಿನ್ಯನು ರಾಜನಾದಂದಿನಿಂದ ಆ ದೇಶದಲ್ಲಿ ಭಾರತೀಯ ಸಂಸ್ಕೃತಿ ಬೇರೂರಿಕೊಂಡಿತು. ಭಾರತ ಕಾಂಬೋಜ ದೇಶಗಳ ನಡುವೆ ವಾಣಿಜ್ಯವು ವಿಸ್ತಾರವಾಗಿ ನಡೆಯ ತೊಡಗಿತು.

ಕಾಂಬೋಜದಲ್ಲಿ ಲಭ್ಯವಾದ ಒಂದು ಶಾಸನದ ಮೂಲಕವಾಗಿ, ಕೌಂಡಿನ್ಯ ವಂಶೀಯರಾದ ರಾಜರಿಗೆ ವರ್ಮ ಎಂಬ ನಾಮವು ಬಿರುದಾಂಕಿತ ವಾಗಿತ್ತೆಂದು ತಿಳಿಯುತ್ತದೆ. ಅವರ ಪರಿಪಾಲ ನೆಯ ಕಾಲದಲ್ಲಿ ಅನೇಕ ದೇವಾಲಯಗಳು ನಿರ್ಮಿಸಲ್ಪಟ್ಟವು.





ಅಂತಹ ದೇವಾಲಯಗಳಲ್ಲಿ ಅಂಗ್‌ಕಾರನಾಥ್ ಎಂಬುದು ಪ್ರಸಿದ್ಧವಾದುದು. ಅದು ಪೂರ್ವ ದಲ್ಲಿ ಯಶೋದರಾ ಪುರವೆನಿಸಿದ್ದು, ಈಗ ಅಂಗ್‌ಕಾರ್‌ಥೋಮ್ ಎನಿಸುವ ನಗರದಲ್ಲಿ ನಿರ್ಮಿಸಲ್ಪಟ್ಟದೆ. ಆ ದೇವಾಲಯದ ಶಿಲ್ಪ ಕಲೆ ಗಳಿಗೆ ಮತ್ತೆಲ್ಲಿಯೂ ಸಾಟಿ ಇಲ್ಲೆಂಬುದು ನಿಜಕ್ಕೂ ಅತಿಶಯೋಕ್ತಿಯಲ್ಲ.



# ಸಂದೇಹ ನಿವಾರಣೆ

ಒಂದು ದಿನ ವಿದರ್ಭದ ರಾಜನಾದ ಪ್ರಸೇನ ಮಹಾರಾಜನು ದರಬಾರು ನಡೆಸಿಕೊಂಡಿದ್ದನು. ಆಸ್ಥಾನ ವಿದೂಷಕನು ಏನೋ ಹೇಳುವುದನ್ನು ಎಲ್ಲರೂ ನಗುಮೊಗದಿಂದ ಸ್ವಾರಸ್ಯವಾಗಿ ಕೇಳಿ ಕೊಂಡಿದ್ದರು. ಆಗ ಒಬ್ಬ ವಾರ್ತಾವಾಹಕನು ಸಭೆಯೊಳಗೆ ಹೊಕ್ಕನು. ವಿದೂಷಕನ ಮಾತು ಅರ್ಧಕ್ಕೇ ನಿಂತಿತು. ಆಗ ವಾರ್ತಾವಾಹಕನು ರಾಜನೊಂದಿಗೆ ಹೊಸ ಸಮಾಚಾರವನ್ನು ಹೇಳಿದನು. ತಮ್ಮ ನೆರೆಹೊರೆಯ ರಾಜರಾದ ಅವಂತಿ ಮತ್ತು ಮಣಿಪುರಗಳ ರಾಜರ ನಡುವೆ ನಡೆದ ಯುದ್ಧದಲ್ಲಿ ವಿಶೇಷವಾಗಿ ಜನನಷ್ಟವಾಯಿತೆಂದೂ, ಗ್ರಾಮಗಳೆಲ್ಲ ಧ್ವಂಸವಾಗಿ ಹೋದುವೆಂದೂ ಅವನು ಹೇಳಿದ ಸಮಾಚಾರವಾಗಿತ್ತು.

ಅದನ್ನು ಕೇಳಿ ಅಷ್ಟರವರೆಗೆ ಆಸ್ಥಾನ ವಿದೂಷಕನ ಹಾಸ್ಯ ಸಂಭಾಷಣೆಗಳಿಂದ ವಿನೋದಲಹರಿಯಲ್ಲಿ ತೇಲಿಕೊಂಡಿದ್ದ ಸಭಿಕರು ದಿಗಿಲುಬಡಿದವರ ಹಾಗೆ ಮೌನವಾಗಿದ್ದು ಬಿಟ್ಟರು. ಆಗ ಇದ್ದಕ್ಕಿದ್ದ ಹಾಗೆ ವಿದೂಷಕನು ಸಾಯುವವನ ಹಾಗೆ ಕೂಗಿ ಹಾರಿ ಎದ್ದು ತಲೆಯ ರುಮಾಲನ್ನು ತೆಗೆದು ನೆಲಕ್ಕೆ ಬಡಿದು ನೋವು ತಾಳಲಾಗದೆ ಚೀರುತ್ತಾ ಕುಣಿಯ ತೊಡಗಿದನು. ರುಮಾಲಿನಲ್ಲಿ ಸೇರಿಕೊಂಡಿದ್ದ ಒಂದು ಚೇಳು ಅವನ ತಲೆಗೆ ಬಲವಾಗಿ ಚುಚ್ಚಿಬಿಟ್ಟಿತ್ತು. ವಿದೂಷಕನು ಪಡುವ ಸಂಕಟದ ಚೇಷ್ಟೆ ನೋಡಿ ಸಭಿಕರೆಲ್ಲ ಗಲಗಲನೆ ನಕ್ಕರು.

ಇದನ್ನೆಲ್ಲ ಗಮನಿಸಿದ ರಾಜನು ತನ್ನ ಮಂತ್ರಿಯಾದ ಸುಬುದ್ಧಿಯೊಡನೆ, "ನೋಡಿದಿರಾ ಮಹಾಮಂತ್ರಿಗಳೇ, ಅಲ್ಲೆಲ್ಲಿಯೋ ಹೊರಗಿನ ರಾಜ್ಯದಲ್ಲಿ ನಡೆದ ಪ್ರಾಣನಷ್ಟಗಳ ಸಮಾಚಾರ ಕೇಳಿ ಚಿಂತೆಯಿಂದ ಮೌನ ವಹಿಸಿದ ಸಭಿಕರು, ವಿದೂಷಕನ ನೋವನ್ನು ನೋಡಿ ಹೊಟ್ಟೆ ಹುಣ್ಣಾಗುವಂತೆ ನಗುತ್ತಾರೆ. ಇದನ್ನು ನೋಡುವಾಗ ಮನುಷ್ಯರನ್ನು ಹೆಚ್ಚಾಗಿ ನೋಯಿಸುವುದು ಯಾವುದೆಂದೂ, ಹೆಚ್ಚಾಗಿ ಆನಂದಗೊಳಿಸುವುದು ಯಾವುದೆಂದೂ ತಿಳಿದುಕೊಳ್ಳಬೇಕೆಂದು ಕಾಣುತ್ತದೆ. ಅಲ್ಲವೆ ?" ಎಂದನು.

ಮಂತ್ರಿ ಒಂದೆರಡು ಕ್ಷಣ ಆಲೋಚಿಸಿ, "ಮಹಾರಾಜರೇ, ಮನುಷ್ಯನಿಗೆ ಶಾರೀರಕ ಹಾಗು ಮಾನಸಿಕ ಎಂಬ ಎರಡು ಬಗೆಯ ಕಷ್ಟಗಳು

ಎಂ. ಡಿ. ಸೌಜನ್ಯ

ಬರುತ್ತವೆ. ಅವುಗಳಲ್ಲಿ ತಾಳಲು ಅಸಾಧ್ಯವಾದುದು ಮಾನಸಿಕ ಕಷ್ಟವೇ ! ಮುಖ ಮೂಗು ತಿಳಿಯದವರಾದರೂ ಯುದ್ಧದ ಕಾರಣದಿಂದ ನೂರಾರು ಜನರು ಸತ್ತುಹೋದರೆಂಬ ವಾರ್ತೆಯನ್ನು ಕೇಳಿದಾಗ ಸಭಿಕರ ಮನಸ್ಸು ವಿವಶವಾಗಿ ಅನುತಾಪವೆದ್ದ ಕಾರಣದಿಂದ ಮೌನವಾಗಿದ್ದರು. ಆದರೆ ದಿನಾ ತಮ್ಮನ್ನು ನಗಿಸುವ ವಿದೂಷಕನು ಶಾರೀರಕ ನೋವಿನಿಂದ ಕೂಗಾಡುವಾಗ ಎಲ್ಲರಿಗೂ ನಗೆ ಬಂದಿತು." ಎಂದನು.

"ನೀವು ಹೇಳುವ ಮಾತನ್ನು ಆಲೋಚಿಸುವಾಗ ಶಾರೀರಕ ಮಾನಸಿಕ ಬಾಧೆಗಳ ನಡುವಿನ ಅಂತರವು ಬಹಳ ಸೂಕ್ಷ್ಮವೆನಿಸುತ್ತದೆ. ಇವುಗಳಲ್ಲಿ ಮಾನಸಿಕ ಬಾಧೆ ತಾಳಲು ಸಾಧ್ಯವಿಲ್ಲವೆಂಬುದನ್ನು ನಿರೂಪಿಸಲು ಸಾಧ್ಯವೆ ? " ಎಂದು ರಾಜನು ಕೇಳಿದನು.

"ನಿಮ್ಮ ಸಹಾಯವಿದ್ದರೆ ನಿರೂಪಿಸಬಹುದು" ಎಂದನು ಮಂತ್ರಿ. ರಾಜನೂ ಒಪ್ಪಿಕೊಂಡನು. ಆಮೇಲೆ ಮಂತ್ರಿ ಒಬ್ಬ ಮುದುಕನ ವೇಷ ಹಾಕಿಕೊಂಡು, ನಗರದ ಹೊರಗಿರುವ ಕಾಳೀ ದೇವಾಲಯಕ್ಕೆ ಹೋದನು.

ಆನೇಕಮಂದಿ ಭಕ್ತರು ಆ ಕಾಳೀ ದೇವಾಲಯಕ್ಕೆ ಬಂದು ತಮ್ಮ ತಮ್ಮ ಬಯಕೆಗಳನ್ನು ಕೇಳಿಕೊಂಡು ದೇವಿಗೆ ಪ್ರಣಾಮ ಮಾಡಿ ಹೋಗುತ್ತಿದ್ದರು. ಹಾಗೆ ಬಂದು ಹೋಗುವವರಲ್ಲಿ ವಿಕಟಾಕ್ಷನೆಂಬ ಯುವಕ ಸನ್ಯಾಸಿಯನ್ನು ಪರೀಕ್ಷೆ ಮಾಡಬೇಕೆಂದು ಮಂತ್ರಿಗೆ ತೋರಿತು.

ವಿಕಟಾಕ್ಷನೊಬ್ಬ ಪರಮ ಸೋಮಾರಿ. ಯಾವ ಕೆಲಸವನ್ನೂ ಮಾಡದೆ ಕಾಲಕಳೆಯಬಹುದೆಂತಲೇ ಸನ್ಯಾಸಿಯ ಸೋಗು ಹಾಕಿಕೊಂಡಿದ್ದನು. ಅವನು ತೀರ ಮೈಗಳ್ಳನಾದುದರಿಂದಲೇ, ಆಲಯದ ಮಠದಲ್ಲಿರುವ ಇತರ ಸನ್ಯಾಸಿಗಳೊಂದಿಗೆ ಸ್ನಾನಕ್ಕೆ ಹೋಗದೆ, ಆಲಸ್ಯದಿಂದ ಪ್ರತ್ಯೇಕವಾಗಿ ಸ್ನಾನದ ಕಾಟ ತೀರಿಸಿಕೊಂಡು ಮೆಲ್ಲನೆ ಬರುತ್ತಿದ್ದನು. ಆಗ ದಾರಿಯ ಮರಳಿನಲ್ಲಿ ಒಂದ ಕಡೆ ಪಳಪಳನೆ ಹೊಳೆಯುವ ವಜ್ರದುಂಗುರವು ಅವನ ಕಣ್ಣಿಗೆ ಬಿತ್ತು.



ವಿಕಟಾಕ್ಷನು ಥಕ್ಕನೆ ಬಗ್ಗಿ ಆ ಉಂಗುರವನ್ನು ಎತ್ತಿಕೊಂಡು ಸ್ವಲ್ಪದೂರ ನಡೆಯುವಷ್ಟರಲ್ಲಿ, ಒಬ್ಬ ಮುದುಕನು ಏನನ್ನೋ ಹುಡುಕುತ್ತ, "ಅಯ್ಯೋ! ಇನ್ನು ನನ್ನ ಮಗನ ಭವಿಷ್ಯತ್ತೇ ನಾಶವಾದ ಹಾಗಾಯಿತು. ಇನ್ನು ನಾನು ಬದುಕಿ ಏನು ಪ್ರಯೋಜನ?" ಎಂದು ದುಃಖದಿಂದ ಬಾಯಿಬಿಟ್ಟೇ ಹೇಳಿಕೊಳ್ಳುತ್ತಿದ್ದನು.

ಆ ಮುದುಕನು ತನಗೆ ಸಿಕ್ಕಿದ ವಜ್ರದುಂಗುರವನ್ನೇ ಹುಡುಕುವುದೆಂದು ವಿಕಟಾಕ್ಷನಿಗೆ ಗೊತ್ತಾಯಿತು. ಮುದುಕನು ಧರಿಸಿದ ಬೆಲೆಬಾಳುವ ಬಟ್ಟೆಬರೆ ಗಳನ್ನೂ, ಕೊರಳಿನಲ್ಲಿರುವ ರತ್ನಗಳ ಹಾರವನ್ನೂ ನೋಡಿ ಆಶ್ಚರ್ಯಪಡುತ್ತ, "ಏನನ್ನು ಹುಡುಕು ತ್ತೀರಿ ಅಯ್ಯಾ?" ಎಂದು ಕೇಳಿದನು.

"ಈ ಸ್ಥಳದಲ್ಲಿ ಎಲ್ಲಿಯೋ ನನ್ನದೊಂದು ವಜ್ರದುಂಗುರವು ಬಿದ್ದುಹೋಯಿತು. ನನ್ನ ಕಣ್ಣಿಗೂ ಚತ್ವಾರ ಬಂದಿದೆ. ಅದನ್ನು ಸ್ವಲ್ಪ ಹುಡುಕಿ ಕೊಡುವಿರಾದರೆ, ನನ್ನ ರತ್ನದ ಹಾರವನ್ನು ನಿಮಗೆ ಬಹುಮಾನವಾಗಿಕೊಡುತ್ತೇನೆ. ಸ್ವಲ್ಪ ಸಹಾಯ ಮಾಡುವಿರಾ?" ಎಂದನು ಮುದುಕ.

ವಿಕಟಾಕ್ಷನು ನೋಡುತ್ತೇನೆಂದು ಹೇಳಿ, ಹುಡುಕುವಹಾಗೆ ನಟಿಸುತ್ತ ವಜ್ರದುಂಗುರವನ್ನು ಕೆಳಗೆ ಹಾಕಿ, ಮತ್ತೆ ಕೈಗೆತ್ತಿಕೊಂಡು ಮುದುಕನಿಗೆ ಕೊಟ್ಟನು. ಮುದುಕನು ಅವನಿಗೆ ತನ್ನ ರತ್ನಹಾರ ವನ್ನು ತೆಗೆದುಕೊಟ್ಟು ಅಲ್ಲಿಂದ ಹೊರಟನು.

ಮುದುಕನು ಸ್ವಲ್ಪದೂರ ಹೋದ ಮೇಲೆ ವಿಕಟಾಕ್ಷನಿಗೆ ಥಕ್ಕನೆ ಒಂದು ಅನುಮಾನ ಉಂಟಾಯಿತು. ಅವನು ಬೇಗಬೇಗನೆ ಮುದುಕ ನನ್ನು ಸಮೀಪಿಸಿ, "ಅಯ್ಯಾ. ನೀವು ಕಳೆದು ಕೊಂಡ ಉಂಗುರಕ್ಕಿಂತಲೂ ಈ ರತ್ನಹಾರವು ಹೆಚ್ಚು ಬೆಲೆಯುಳ್ಳದ್ದು ಹೌದಷ್ಟೆ?" ಎಂದು ಕೇಳಿದನು.

"ನಿಜವೇ. ಸಂದೇಹವಿಲ್ಲ. ಆದರೆ ಈ ಉಂಗುರ ದಲ್ಲಿ ಒಂದು ದೊಡ್ಡ ಮಹಿಮೆಯಿದೆ. ಇದು ಕಾಳೀದೇವಿ ಪ್ರಸಾದಿಸಿದ ಉಂಗುರ. ಇದನ್ನು



ಧರಿಸಿದವನು ರಾಜನಿಗೆ ಅಳಿಯನಾಗಿ ಅವನ ಅನಂತರ ರಾಜನಾಗುತ್ತಾನೆ. ಇದನ್ನು ಧರಿಸಿ ರಾಜನ ಮುಂದೆ ನಿಂತರೇ ಸಾಕು. ಇದನ್ನು ನನ್ನ ಕುಮಾರನಿಗೆ ಕೊಡುತ್ತೇನೆ" ಎಂದನು ಮುದುಕ.

ಮರುಕ್ಷಣವೇ ವಿಕಟಾಕ್ಷನು ಮುದುಕನ ಕೈಯಿಂದ ವಜ್ರದುಂಗುರವನ್ನು ಕವಕ್ಕನೆ ಕಿತ್ತು ಕೊಂಡು, "ಈ ಉಂಗುರವನ್ನು ಧರಿಸಿ ನಾನೇ ಆ ಪ್ರಸೇನರಾಜನ ಅಳಿಯನಾಗಿ, ರಾಜನೂ ಆಗುತ್ತೇನೆ. ಇದನ್ನು ಹುಡುಕಿದವನು ನಾನೇ" ಎಂದು ಹೇಳಿ ಬೇಗಬೇಗನೇ ನಗರದ ಕಡೆಗೆ ಹೋದನು. ಮುದುಕನ ವೇಷದಲ್ಲಿದ್ದ ಮಂತ್ರಿಯೂ ಅವನನ್ನು ಅನುಸರಿಸಿಕೊಂಡೇ ಹೋದನು.

ರಾಜನು ಸಭೆಯಲ್ಲಿ ಸಿಂಹಾಸನದ ಮೇಲೆ ಕುಳಿತಿದ್ದನು. ಸನ್ಯಾಸಿ ವೇಷದ ವಿಕಟಾಕ್ಷನು ರಾಜನ ಮುಂದೆ ಹೋಗಿ ನಿಂತು ವಜ್ರದುಂಗುರದ ಬೆರಳನ್ನು ರಾಜನ ಮುಂದೆ ತೋರಿಸಿ, "ನಾನು ಯಾರೆಂಬುದನ್ನು ನೋಡಿರಿ" ಎಂದನು.

"ಸಂದೇಹವೇನಿದೆ ? ನೋಡಿದ ಕೂಡಲೇ ಸನ್ಯಾಸಿ ಯೆಂದು ಗೊತ್ತೇ ಆಗುತ್ತದೆ. ನನಗೆ ಈ ಉಂಗುರ ವನ್ನು ತೋರಿಸುವುದರ ಅರ್ಥವೇನು ?" ಎಂದನು ರಾಜ. "ಈ ಉಂಗುರವನ್ನು ಧರಿಸಿದವನು ನಿಮಗೆ ಅಳಿಯನಾಗಿ, ಆಮೇಲೆ ನಿಮ್ಮ ಸಿಂಹಾಸನಕ್ಕೂ ವಾರಸನಾಗುತ್ತಾನೆ. ಇದರ ಮಹತ್ವ ನಿಮಗೇನೂ ತಿಳಿಯಲಿಲ್ಲವೇ ?" ಎಂದನು ವಿಕಟಾಕ್ಷ.

"ಮಹತ್ವವೇ ? ಆ ಮಹತ್ವವು ನನ್ನ ಮೇಲೆ ಬಿದ್ದಿದ್ದರೆ ನಿನ್ನನ್ನು ಆಗಲೇ ಸಿಂಹಾಸನದ ಮೇಲೆ ಆಹ್ವಾನಿಸುತ್ತಿದ್ದೆನಲ್ಲಾ ?" ಎಂದನು ರಾಜ.

ವಿಕಟಾಕ್ಷನ ಮುಖವು ಒಮ್ಮೆಗೇ ಬಿಳಿಚಿ ಕೊಂಡಿತು. ಅವನ ಹಿಂದೆಯೇ ಸಭೆಯೊಳಗೆ ಬಂದ ಮಂತ್ರಿ ರಾಜನನ್ನು ಸಮೀಪಿಸಿ, ತನ್ನ ಗಡ್ಡ ಗಳನ್ನು ಕಿತ್ತುಕೊಂಡು, "ಮಹಾರಾಜರೇ ! ಇದು ನನ್ನದೇ ನಾಟಕ. ಈ ಯುವಕ ಸನ್ಯಾಸಿ ಗುಡ್ಡದಂಥ ನಂಬುಗೆಯಿಂದ ಇಲ್ಲಿಗೆ ಬಂದಿದ್ದಾನೆ ಪಾಪ !" ಎಂದನು.

ವಿಕಟಾಕ್ಷನು ವಿಕಾರವಾದ ಆಕ್ರಂದನ ಮಾಡಿ ಕೊಂಡು ಮೂರ್ಛೆ ಹೋಗಿ ಬಿದ್ದನು. ಮಂತ್ರಿ ಭಟರನ್ನು ಕರೆದು ಅವನನ್ನು ವೈದ್ಯಶಾಲೆಗೆ ಒಯ್ಯುವಂತೆ ಹೇಳಿ, ರಾಜನೊಂದಿಗೆ, "ನೋಡಿದಿರಾ ಮಹಾರಾಜರೇ, ಇವನಿಗೆ ನಾವು ಒಂದು ಸಣ್ಣ ಶಾರೀರಕ ನೋವನ್ನು ಕೂಡಾ ಉಂಟುಮಾಡಿಲ್ಲ. ಆದರೆ ಮಾನಸಿಕವಾದ ಆಶಾಭಂಗದ ನೋವನ್ನು ತಾಳಲಾಗದೆ ಮೂರ್ಛೆಹೋಗಿ ಬಿದ್ದ" ಎಂದನು.

ತನ್ನ ಸಂದೇಹ ನಿವಾರಣೆಯಾಯಿತೆಂದುಕೊಂಡು ರಾಜನು ತೃಪ್ತಿಯಿಂದ ತಲೆಯೊಲಿದನು.



# ನಂಬುಗೆ

ಒಂದು ಸಾರಿ ಒಂದು ಪ್ರಾಂತದಲ್ಲಿ ಮಳೆ ಬಾರದೆ ಬರ ಬಂದಿತು. ಅಲ್ಲಿ ಒಬ್ಬ ಸನ್ಯಾಸಿ ತಿರುಗಾಡುತ್ತ ಒಣಗಿದ ಕೆರೆಕಟ್ಟೆಯ ಹತ್ತಿರವಿದ್ದ ಮಠದಲ್ಲಿ ತಂಗಿದನು. ಗ್ರಾಮಸ್ಥರು ಅವನ ಸುತ್ತಲೂ ಕೂಡಿ ತಮ್ಮ ಗೋಳು ಹೇಳಿಕೊಂಡರು.

ಸನ್ಯಾಸಿ ಅವರೊಂದಿಗೆ, "ಈ ದಿನ ಗುರುವಾರ ತಾನೇ ? ಬರುವ ಗುರುವಾರದ ದಿನ ಬೇಕಾದ ಹಾಗೆ ಮಳೆ ಬರಲು ಪ್ರಾರಂಭವಾಗುತ್ತದೆ. ಅದಕ್ಕಾಗಿ ನಾನು ಒಂದು ಹೋಮವನ್ನು ಮಾಡುತ್ತೇನೆ. ನನ್ನ ಮಾತಿನಲ್ಲಿ ನಂಬುಗೆ ಇದ್ದವರು ಮಾತ್ರ ಚಂದಾ ಹಣ ತಂದು ಕೊಡಿರಿ" ಎಂದನು.

ಸನ್ಯಾಸಿಯ ಮುಂದೆ ಚಂದಾ ರೂಪದ ಹಣ ಸಂಜೆಯ ಒಳಗೆ ಸಾವಿರಾರು ರೂಪಾಯಿ ಸೇರಿತು. ಮಠದಲ್ಲಿ ಹೋಮ ಧೂಮವೆದ್ದಿತು.

ಮತ್ತೆ ಗುರುವಾರವೂ ಬಂದಿತು. ಮಳೆ ಬರುವ ಸೂಚನೆ ಕೂಡಾ ಕಾಣಲಿಲ್ಲ. ಬಿಸಿಲಿನ ಬೇಗೆ ಇನ್ನೂ ಹೆಚ್ಚಾಯಿತು. ಜನರು ಸನ್ಯಾಸಿಯನ್ನು ಬಯ್ಯತೊಡಗಿದರು.

ಸನ್ಯಾಸಿ ಮುಗುಳು ನಗುತ್ತ "ನನ್ನ ಮಾತನ್ನು ನೀವಾರೂ ನಂಬಲೇ ಇಲ್ಲ. ನಂಬಿರುತ್ತಿದ್ದರೆ ಮಳೆ ಬಂದರೆ ಉಳುವುದಕ್ಕೆ ಎತ್ತುಗಳನ್ನೂ ನೇಗಿಲುಗಳನ್ನೂ ತಯಾರು ಮಾಡಿಕೊಳ್ಳುತ್ತಿದ್ದಿರಿ, ಒಡಕಿನ ಕೆರೆಗೆ ಕಟ್ಟೆ ಕಟ್ಟುತ್ತಿದ್ದಿರಿ. ಸೋರುವ ಮನೆಗಳನ್ನು ದುರಸ್ತಿ ಮಾಡುತ್ತಿದ್ದಿರಿ. ಎಲ್ಲಕ್ಕೂ ಮೊದಲು ಈ ಮಠದ ಮಾಡನ್ನು ಸರಿ ಮಾಡುತ್ತಿದ್ದಿರಿ. ಇನ್ನು ಈ ಗ್ರಾಮದಲ್ಲಿದ್ದು ನನ್ನ ಕಾಲವನ್ನು ವ್ಯರ್ಥಗೊಳಿಸಲಾರೆನು" ಎಂದು ಹೇಳಿ ಇನ್ನೊಂದು ಊರಿಗೆ ಹೊರಟು ಹೋದನು.





# ಪಂಥದ ಭೀಮ

ಒಂದು ಊರಿನಲ್ಲಿ ಬಹಳ ಜಾಣನೆಂದು ಹೆಸರು ಪಡೆದ ಭೀಮನೆಂಬವನಿದ್ದ. ಅವನು ಎಂತಹ ಪಂಥವನ್ನಾದರೂ ಗೆಲ್ಲುತ್ತ, ಪಂಥದ ಭೀಮನೆಂದು ಹೆಸರು ಪಡೆದಿದ್ದ. ಒಂದು ದಿನ ಭೀಮ ಎಲ್ಲಪ್ಪ ನೊಂದಿಗೆ ಮಾತಾಡಿಕೊಂಡಿದ್ದಾಗ, ಗ್ರಾಮದ ಗೌಡರ ವಿಷಯ ಬಂತು. "ನಮ್ಮ ಗ್ರಾಮಾಧಿಕಾರಿಗಳಾದ ಗೌಡರು ಪರಮ ಧರ್ಮಾತ್ಮರು" ಎಂದನು ಎಲ್ಲಪ್ಪ.

ನಿಜಕ್ಕೂ, ಆ ಗ್ರಾಮದ ಗೌಡರು ಮಹಾ ಮುಂಗೋಪಿಗಳೆಂಬುದು ಎಲ್ಲರಿಗೂ ಗೊತ್ತಿತ್ತು. ಅಂತಲೇ ಭೀಮನು ಎಲ್ಲಪ್ಪನು ಹೇಳಿದ ಮಾತು ಕೇಳಿ, "ಅವರೆಂಥ ಧರ್ಮಾತ್ಮರು! ಲಂಚ ತಿಂದು ಮಹಾಕೊಬ್ಬಿದ್ದಾರೆ. ಅದಕ್ಕೇ ನಾನು ದಿನಾ ಅವರ ಮುಖಕ್ಕೇ ಬಾಯಿಗೆ ಬಂದ ಹಾಗೆ ಬೈದರೂ ತುಟಿಪಿಟಕ್ಕೆನ್ನುವುದಿಲ್ಲ" ಎಂದನು.

ಭೀಮನು ಮಾತನ್ನು ಎಲ್ಲಪ್ಪ ನಂಬಲೇ ಇಲ್ಲ. ಹೀಗೆ ಸುಳ್ಳು ಹೇಳಬಾರದೆಂದನು ಭೀಮನಿಗೆ.

"ಹಾಗಾದರೆ ಪಂಥಕಟ್ಟು!" ಎಂದ ಭೀಮ.

"ಸರಿ. ನಾನು ಕೇಳುವಹಾಗೆ ನೀನು ಅವರನ್ನು ಬೈಯಬೇಕು. ಅವರಿಂದ ನೀನು ಪ್ರತಿಭಟನೆ ಪಡೆಯದ ಪಕ್ಷಕ್ಕೆ ನಾನು ನಿನಗೆ ನೂರು ರೂಪಾಯಿ ಕೊಡುತ್ತೇನೆ" ಎಂದನು ಎಲ್ಲಪ್ಪ.

"ಹಾಗೇ ಆಗಲಿ. ಸ್ನಾನ ಮುಗಿಸಿಕೊಂಡು ಬರುತ್ತೇನೆ. ಇಲ್ಲೇ ಇರು" ಎಂದು ಹೇಳಿ ಭೀಮನು ಒಳಗೆ ಹೋದನು. ಸ್ವಲ್ಪ ಹೊತ್ತಿನ ಮೇಲೆ ಅವನು ಹೊರಗೆಬಂದು, "ನಾನು ಹೋಗಿ ಗೌಡರನ್ನು ಬಾಯಿಗೆ ಬಂದ ಹಾಗೆ ಬಯ್ಯುವಾಗ ನೀನು ಏನೂ ಮಾತಾಡಕೂಡದು. ಇದನ್ನು ಷರತ್ತು ಅಂತ ತಿಳಿ" ಎಂದನು.

ಸರಿಯೆಂದು ಒಪ್ಪಿದನು ಎಲ್ಲಪ್ಪ, ಇಬ್ಬರೂ ಕೂಡಿ ಸ್ವಲ್ಪದೂರ ಹೋದ ಮೇಲೆ ಭೀಮನು ಎಲ್ಲಪ್ಪನೊಂದಿಗೆ, "ಪಂಥ ಗೆಲ್ಲಲಿಕ್ಕೆ ನನ್ನದು ಕೆಲವು ಪದ್ಧತಿಗಳಿವೆ. ಆದ್ದರಿಂದ ನಾನು ಮುಂದಾಗಿ ಹೋಗುತ್ತೇನೆ. ನೀನು ಸ್ವಲ್ಪ ಹೊತ್ತು ತಡೆದು ಆಮೇಲೆ ಅಲ್ಲಿಗೆ ಬಾ. ನೀನು ಬರುವಾಗ ನಾನು ಗೌಡರನ್ನು ಬಯ್ಯುತ್ತಾ ಇರುತ್ತೇನೆ. ಅವರು ಶಾಂತವಾಗಿ ಕೇಳುತ್ತಿರುತ್ತಾರೆ" ಎಂದನು.

ಹಾಗೇ ಆಗಲೆಂದು ಎಲ್ಲಪ್ಪ ಹಿಂದೆಯೇ ನಿಂತನು. ಗೌಡರಿಗೆ ಹಣದ ಆಸೆಯೇ ಇಲ್ಲವೆಂದೂ, ಎಷ್ಟು

ಹಣಿಸಿಗುವುವಾದರೂ ಬೈಗುಳಿನಂಥ ಹೀನ ಮಾತುಗಳಿಗೆ ಅವಕಾಶ ಕೊಡುವವರಲ್ಲವೆಂದೂ ಎಲ್ಲಪ್ಪನಿಗೆ ಚೆನ್ನಾಗಿ ಗೊತ್ತು.

ಸ್ವಲ್ಪ ಹೊತ್ತು ತಾಳಿ ಎಲ್ಲಪ್ಪ 'ಗೌಡರ ಮನೆಗೆ ಹೋದಾಗ ಭೀಮನು ಗೌಡರನ್ನು ನಾನಾವಿಧವಾಗಿ ಹಳಿಯುತ್ತಿದ್ದನು. "...ನೀವು ಲಂಚಕೋರರು! ಊರಲ್ಲಿ ನೀವು ಮಾಡುವ ಅನ್ಯಾಯಗಳಿಗೂ, ಅಕ್ರಮಗಳಿಗೂ ಒಂದು ಲೆಕ್ಕವಿದೆಯೇ? ನೀವು ಹೋದರೆ ಹೊರತು ಈ ಊರಿಗೆ ವಿಮೋಚನೆ ಇಲ್ಲ!..." ಇತ್ಯಾದಿ.

ಗೌಡರು ಶಾಂತವಾಗಿ ಭೀಮನ ಮಾತುಗಳನ್ನು ಕೇಳುತ್ತ, "ಸುಮ್ಮ ಸುಮ್ಮನೆ ಆವೇಶಪಡಬಾರದು ಭೀಮಾ. ನೀನು ಸ್ವಲ್ಪ ಹೊತ್ತು ಹಾಗೆ ಕೂಡು. ಸ್ಥಿಮಿತ ಬಂದೀತು. ಸ್ವಲ್ಪ ಮಜ್ಜಿಗೆ ಕುಡಿದು ಹೋಗುವಿಯಂತೆ" ಎನ್ನುತ್ತಿದ್ದರು.

ಅಡಿಗಡಿಗೆ ಅವರು ಹೇಳುವ "ಶಾಂತನಾಗಪ್ಪಾ!" ಎನ್ನುವ ಮಾತನ್ನು ಲಕ್ಷ್ಯಮಾಡದೆ ಭೀಮನು ರೊಚ್ಚಿಗೆದ್ದು ರೇಗುತ್ತಿದ್ದನು. ಎಲ್ಲಪ್ಪ ಈ ವಿಚಿತ್ರವನ್ನು ನೋಡುತ್ತ ಸ್ತಂಭಿಸಿ ನಿಂತನು. ಮಹಾ ಕೋಪಿಷ್ಠರೆಂದು ಹೆಸರು ಪಡೆದ ಗೌಡರು ಇಷ್ಟೆಲ್ಲ ಹೀನ ಮಾತುಗಳ ಮುಂದೆ ಅಷ್ಟೊಂದು ಶಾಂತವಾಗಿರುವುದನ್ನು ನೋಡಿ ಎಲ್ಲಪ್ಪನಿಗಾದ ಆಶ್ಚರ್ಯಕ್ಕೆ ಮೇರೆ ಇರಲಿಲ್ಲ. ಒಂದು ವೇಳೆ ಅವರು ನಿಜಕ್ಕೂ ಅನ್ಯಾಯಗಳನ್ನು ಮಾಡುವರೇನೋ ಎಂಬ ಅನುಮಾನ ಕೂಡಾ ಅವನಿಗಾಯಿತು. ಈ ಆಲೋಚನೆ ತಲೆಹಾಕಿದ್ದರಿಂದ ಬಹಳ ಸಂಕಟವೂ ಆಯಿತು. ಏಕೆಂದರೆ ಅವನಿಗೆ ಗೌಡರ ಮೇಲೆ ತುಂಬ ಭಕ್ತಿ.

ಬೈದು ಬೈದು ಆಯಾಸಗೊಂಡು ಸ್ವಲ್ಪ ಹೊತ್ತಿಗೆ ಉಸಿರುಬಿಡುತ್ತ ಕುಸಿಕುಳಿತ ಭೀಮ. ಅವನಿಗೆ ಸ್ವಲ್ಪ ಮಜ್ಜಿಗೆ ತಂದುಕೊಡುವಂತೆ ಗೌಡರು ತಮ್ಮ ಹೆಂಡತಿಗೆ ಹೇಳಿ ಕಳಿಸಿದರು. ಅದರಂತೆ ಅವರ ಹೆಂಡತಿ ಮಜ್ಜಿಗೆ ತಂದು ಭೀಮನ ಮುಂದಿಟ್ಟು ನೂರು ರೂಪಾಯಿ



ಗಳನ್ನೂ. ಅವನ ಕೈಗೆ ಕೊಟ್ಟಳು. "ಆ ಹಣ ಏನದು ?" ಎಂದು ಗೌಡರು ಹೆಂಡತಿಯನ್ನು ಕೇಳಿದರು.

"ಎಲ್ಲಪ್ಪನಿಗೆ ನಿಮ್ಮ ಮೇಲೆ ತುಂಬಾ ಭಕ್ತಿ ಗೌರವವಿದೆಯಷ್ಟೇ ? ನಿಮ್ಮನ್ನು ಯಾರಾದರೂ ಸಣ್ಣ ಮಾತಿನಿಂದ ಬೈದರೂ ಸಹ ಅವನು ಸಹಿಸಲಾರನಷ್ಟೆ ? ಆ ಮಾತನ್ನೇ ನಾನು ಭೀಮನ ಹತ್ತಿರ ಹೇಳಿದ್ದೆ. ಅದೇನಿಲ್ಲವೆಂದೂ, ನಿಮ್ಮನ್ನು ಯಾರಾದರೂ ಬೈದರೂ ಅವನು ಕೇಳುತ್ತಾ ಸುಮ್ಮನೆ ನೋಡುತ್ತಾ ನಿಲ್ಲುವನೆಂದೂ ಈ ಭೀಮ ನನ್ನ ಹತ್ತಿರ ಪಂಥ ಕಟ್ಟಿದ. ನಾನು ಸೋತೆನಲ್ಲ !" ಎಂದಳು ಗ್ರಾಮಾಧಿಕಾರಿಯ ಹೆಂಡತಿ.

ಅದನ್ನು ಕೇಳಿ ಗೌಡರು ಎಲ್ಲಪ್ಪನ ಕಡೆಗೆ ತಿರುಗಿ, "ಏನೋ ಎಲ್ಲಪ್ಪಾ, ಭೀಮನಿಗೆ ಹುಚ್ಚು ಹಿಡಿದ ಸಂಗತಿ ನಿನಗೆ ಗೊತ್ತಿತ್ತೇನು ?" ಎಂದು ಕೇಳಿದರು.

ಎಲ್ಲಪ್ಪನು ಆಶ್ಚರ್ಯದಿಂದ "ಭೀಮನಿಗೆ ಹುಚ್ಚೆಂದರೇನು ಸ್ವಾಮಿ ?" ಎಂದನು.

"ನಿನಗೆ ಗೊತ್ತಿಲ್ಲವೇ ? ಇವನಿಗೆ ಇದ್ದಕ್ಕಿದ್ದ ಹಾಗೆ ಬುದ್ಧಿ ಕೆಡುತ್ತದೆಂದೂ, ಆಗ ಕಣ್ಣಿಗೆ ಬಿದ್ದ ಯಾರನ್ನಾದರೂ ಬಾಯಿಗೆ ಬಂದ ಹಾಗೆ ಬೈಯುತ್ತಾನೆಂದೂ, ಏನಾದರೂ ಹೇಳಿದರೆ ಹುಚ್ಚು ಇನ್ನಿಷ್ಟು ಜೋರಾಗುತ್ತದೆಂದೂ, ಶಾಂತವಾಗಿ ಸಮಾಧಾನ ಹೇಳಿ, ಸ್ವಲ್ಪ ಮಜ್ಜಿಗೆ ಕುಡಿಯಲಿಕ್ಕೆ ಕೊಟ್ಟರೆ, ನಿಧಾನವಾಗಿ ಹುಚ್ಚು ಬಿಡತ್ತದೆಂದೂ ಅವನ ಮನೆಯಿಂದ ಒಬ್ಬನು ಬಂದು ಹೇಳಿ ಹೋದ" ಎಂದರು ಗೌಡರು.

"ಹೌದಂತೆ. ಹೀಗೆ ನಾಲ್ಕು ದಿನಗಳಿಂದ ಆಗುತ್ತದಂತಲ್ಲಾ ?" ಎಂದಳು ಗೌಡರ ಹೆಂಡತಿ.

"ಹಾಗೇನು ?" ಎಂದು ಎಲ್ಲಪ್ಪನು ಆಲೋಚನೆಗೆ ಬಿದ್ದ. ಭೀಮನು ಸ್ನಾನಮಾಡುತ್ತೇನೆಂದು ಒಳಗೆ ಹೋದಾಗ, ಹಾಗೊಂದು ಸುದ್ದಿಯನ್ನು ಗೌಡರ ಬಳಿಗೆ ಹೇಳಿ ಕಳಿಸಿದ್ದಾನೆಂದು ಅವನು ಊಹಿಸಿ ಕೊಂಡನು. ಅವನು ಗೌಡರಿಗೆ ಏನೋ ಉತ್ತರ ಕೊಡಬೇಕೆಂದಿರುವಾಗ ಭೀಮನು ಅವನ ಬಳಿಗೆ ಹೋಗಿ, "ನನ್ನ ಪಂಥದ ಹಣ ಕೊಟ್ಟು ಆಮೇಲೆ ಗೌಡರಿಗೆ ಉತ್ತರ ಕೊಡು" ಎಂದು ಪಿಸುಗುಟ್ಟಿ ನೂರು ರೂಪಾಯಿ ತೆಗೆದುಕೊಂಡು ಅಲ್ಲಿಂದ ವೇಗವಾಗಿ ಹೊರಟುಹೋದನು.

ತರುವಾಯ ಗೌಡರು ಎಲ್ಲಪ್ಪನ ಮೂಲಕ ನಿಜಸಂಗತಿಯನ್ನು ತಿಳಿದುಕೊಂಡು, "ನಿಮ್ಮ ಪಂಥಕ್ಕೆ ಬೆಂಕೀ ಬೀಳ ! ಇದನ್ನು ಮೊದಲೇ ನನಗೆ ಹೇಳದೆ ಚೋದ್ಯ ನೋಡುತ್ತಾ ನಿಂತೆಯಾ ?" ಎಂದು ಅವನ ಮೇಲೆಯೇ ಉರಿದುಬಿದ್ದರು.





# ಇಬ್ಬರು ಮೋಸಗಾತಿಯರು

೪

**ಬಾ**ಗ್ದಾದು ನಗರಕ್ಕೆ ಹೊಸದಾಗಿ ಬಂದವನು ಅಲ್ಲಿಂದ ಹೊರಟುಹೋಗುವವನನ್ನು ಕುರಿತು, "ಒಂದು ಮುಖ್ಯ ಸಂಗತಿ ಹೇಳಯ್ಯ. ಈ ನಗರದಲ್ಲಿ ಮುಖ್ಯವಾಗಿ ಅನುಭವಿಸತಕ್ಕಂಥಾದ್ದು ಏನೂ ಅಂತ ?" ಎಂದು ಕೇಳಿದನು.

"ಕೆನೆ ಪೂಸಿದ ಜೇನು ರೊಟ್ಟಿ ! ಆಹ ! ಏನು ರುಚಿ ! ನಾನು ಇಲ್ಲಿದ್ದ ಮೂರು ದಿಗನಳೂ ಅದನ್ನೇ ಎಷ್ಟು ತಿಂದರೂ ಸಾಕೆನಿಸದು !" ಎಂದನು ಹೊರಟುಹೋಗುವವನು.

"ಭೇಷ್ ! ಎಷ್ಟು ಖರ್ಚಾದರೂ ನಾನು ಈ ನಗರದಲ್ಲಿ ಇರುವಷ್ಟು ದಿನವೂ ಕೆನೆಪೂಸಿದ ಜೇನು ರೊಟ್ಟೀನೇ ತಿನ್ನುತ್ತೇನೆ." ಅಂದನು ನಗರಕ್ಕೆ ಹೊಸದಾಗಿ ಬಂದವನು. ಹೋಗುವವನು ತನ್ನ ದಾರಿ ಹಿಡಿದು ಹೊರಟುಹೋದನು. ಆಮೇಲೆ ಹೊಸದಾಗಿ ಬಂದವನು ದಿಲೈಲಾ ಕಟ್ಟಲ್ಪಟ್ಟ ಕಡೆಗೇ ಬರತೊಡಗಿದನು. ಅವರ ಸಂಭಾಷಣೆಗಳನ್ನು ಕೇಳುತ್ತಾ ಇದ್ದ ದಿಲೈಲಾ ಆಗಿಂದಾಗಲೇ ಒಂದು ಯುಕ್ತಿಯನ್ನು ಆಲೋಚನೆ ಮಾಡಿಕೊಂಡು ತಯಾರಾಗಿದ್ದಳು. ಅದರಂತೆ ನಡೆದರೆ ತಾನು ತಪ್ಪಿಸಿಕೊಳ್ಳಬಹುದೆಂದು ಅವಳ ನಂಬುಗೆ. ಹೊಸದಾಗಿ ನಗರಕ್ಕೆ ಬಂದವನಿಗೆ ತಾನು ಯಾರೆಂದು ಏನೂ ತಿಳಿಯದು. ಆದ್ದರಿಂದ ಅವನನ್ನು ಮೋಸಪಡಿಸಬಹುದೆಂದು ದಿಲೈಲಾಳಿಗೆ ತೋರಿತು. ಹೀಗೆ ಆಲೋಚಿಸಿ ದಿಲೈಲಾ, "ಸಾಕಪ್ಪಾ ! ನನಗೆ ಬೇಡಯ್ಯಾ ! ನಾನು ತಿನ್ನಲಾರೆ !" ಎಂದು ತನಗೆ ತಾನೇ ಸಂಕಟಪಡುತ್ತ ಹೇಳತೊಡಗಿದಳು. ಅದನ್ನು ಕೇಳಿ ಹೊಸಬನು ಅವಳ ಬಳಿಗೆ ಬಂದು, "ಏನಮ್ಮಾ? ಏನು ಹೇಳುವಿ ? ಯಾಕೆ ಹೀಗೆ ಕಟ್ಟಿಗೆ ಸಿಕ್ಕಿರುವಿ ? ಎಂದು ಕೇಳಿದನು.

ದಿಲೈಲಾ ಮೆಲ್ಲಗೆ ಮಾತಾಡುವಂತೆ ಸನ್ನೆ ತೋರಿಸಿ, "ಅದೇನು ಕೇಳುವಿಯಪ್ಪಾ ? ನನ್ನ ಕರ್ಮ ! ನನ್ನ ಗಂಡ ಕೆನೆಪೂಸಿದ ಜೇನುರೊಟ್ಟಿ ತಯಾರಿಸಿ ಅವುಗಳ ವ್ಯಾಪಾರದಿಂದ ಲಕ್ಷಗಟ್ಲೆ ಸಂಪಾದಿಸಿದ್ದಾನೆ. ಮೊದಮೊದಲು ನನಗೆ ಆ ರೊಟ್ಟಿ ಇಷ್ಟವಾಗಿದ್ದರೂ, ಬರುಬರುತ್ತ ಬಾಯಿಗೆ ವಾಕರಿಕೆಯಾಯಿತು. ಮೊನ್ನೆ ಒಬ್ಬ ದೊಡ್ಡ ಮನುಷ್ಯರು ನಮ್ಮ ರೊಟ್ಟಿಯಂಗಡಿಗೆ ಬಂದಾಗ, ನನ್ನ ಗಂಡ ಅವರಿಗೆ ಉಪಚರಿಸುತ್ತ ಅವರ ಜತೇಲಿ



ನನ್ನನ್ನೂ ಜೇನುರೊಟ್ಟಿ ತಿನ್ನುವಂತೆ ಒತ್ತಾಯಿಸಿ ಬಿಟ್ಟನಪ್ಪಾ. ಬಾಯಿಗಿಟ್ಟ ಕೂಡಲೇ ವಾಕರಿಕೆ ಕುಟ್ಟಿಕುಟ್ಟಿ ಬಂತು ನನಗೆ. ಅದನ್ನು ನೋಡಿ ಬಂದವರಿಗೆ ಅನುಮಾನವಾಗಿ, ಏನೂ ತಿನ್ನದೆಯೇ ಹೊರಟುಹೋದರು. ನನ್ನ ಗಂಡನಿಗೆ ಅವರಿಂದ ಬರಬೇಕಾದ ಹಣವೂ ಬರಲಿಲ್ಲ. ಮಾಡಿಟ್ಟ ಸರಕು ಪೂರಾ ವ್ಯರ್ಥವಾಯಿತು. ಅದೆಲ್ಲ ನಿಜವೇ ಆದರೂ ಇದರಲ್ಲಿ ನನ್ನ ತಪ್ಪು ಏನಿದೆ ಹೇಳು ? ನನ್ನನ್ನು ನನಗೆ ಹಿಡಿಸದ ರೊಟ್ಟಿ ತಿನ್ನುವಂತೆ ಒತ್ತಾಯಿಸಿದ್ದು ಗಂಡನದೇ ತಪ್ಪು. ಆದರೂ ತನ್ನ ವ್ಯಾಪಾರ ಹಾಳುಮಾಡಿದೇ ಅಂತ ಗಂಡ ನನ್ನ ಮೇಲೆ ಫಿರ್ಯಾದಿ ಮಾಡಿದ. ನ್ಯಾಯಾಧಿಕಾರಿ ನನಗೆ ಜೇನುರೊಟ್ಟಿ ತಿನ್ನುವ ಶಿಕ್ಷೆ ವಿಧಿಸಿ ಇಲ್ಲಿ ಕಟ್ಟಿ ಹಾಕಿಸಿದ್ದಾನೆ. ಬೆಳಗಾದ ಕೂಡಲೇ ಭಟರು ಬಂದು ಕೆನೆಹಚ್ಚಿದ ಜೇನುರೊಟ್ಟಿಯುಷ್ಟು ತಂದಿಟ್ಟು ತಿನ್ನಲು ಬಲವಂತಪಡಿಸುತ್ತಾರಪ್ಪ. ಎಲ್ಲರ ಎದುರಿನಲ್ಲಿ ತಿನ್ನಬೇಕಂತೆ. ತಿಂದು ಮುಗಿಸುವ ವರೆಗೂ ಊಟ ಹಾಕಲಾರರು. ನನ್ನ ಕಷ್ಟ ಏನು ಹೇಳಲಪ್ಪಾ !" ಎಂದು ಗೋಳಿಟ್ಟಳು.

"ಅಯ್ಯೋ ! ಅಪ್ವಾ ! ನಿನಗೆ ಎಂಥಾ ಕಷ್ಟ ಬಂತು ! ಆ ಕಷ್ಟ ನನಗಾದರೂ ಬರಬಾರದೆ ?" ಎಂದನು ಹೊಸಬ ಅನುತಾಪದಿಂದ.

"ಹಾಗಾದರೆ ಒಂದು ಮಾಡುತ್ತೀಯಾ ? ನಿನಗೂ ಪುಣ್ಯ ! ನನ್ನ ಕಟ್ಟುಗಳನ್ನು ಬಿಚ್ಚಿಬಿಡು. ನನಗೆ ಬದಲು ನನ್ನಹಾಗೇ ನೀನು ಕಟ್ಟಿನಲ್ಲಿರು. ನನ್ನ ಮುಸುಕುಬಟ್ಟೆ ನಿನಗೇ ಹಾಕುತ್ತೇನೆ. ನಾನೇ ಅಂದುಕೊಂಡು ಭಟರು ನಿನಗೆ ಕೆನೆಪೂಸಿದ ಜೇನು ರೊಟ್ಟಿಗಳಿಂದ ಧಾರಾಳವಾಗಿ ಮೇಯಿಸಿ ಬಿಟ್ಟು ಬಿಡುತ್ತಾರೆ !" ಎಂದರು ದಿಲ್ಶೈಲಾ.

ಮೋಸಹೋದ ಹೊಸಬನು ಅವಳ ಕಟ್ಟು ಬಿಚ್ಚಿದನು. ಅವಳು ಅವನನ್ನು ಕಂಬಕ್ಕೆ ಕಟ್ಟಿ, ಮುಖಕ್ಕೆ ಮುಸುಗುಹಾಕಿ, ಅಲ್ಲಿದ್ದೊಂದು ಕುದುರೆಯ ಮೇಲೇರಿಕೊಂಡು ಬಾಗ್ದಾದಿಗೆ ಹೊರಟುಹೋದಳು.

ಮೈಮರೆತು ನಿದ್ರೆಯಲ್ಲಿದ್ದ ಫಿರ್ಯಾದಿಗಳು ಐವರೂ ಬೆಳಗಾದ ಮೇಲೆ ಎದ್ದು ಕಂಬಕ್ಕೆ ಕಟ್ಟಿರುವುದು ದಿಲ್ಶೈಲಾಳೆಂದೇ ನೆನೆದು. ಮತ್ತೆ ಅವಳನ್ನು ಬೈಯಲು ತೊಡಗಿದರು. ಸುಮ್ಮನೆ ಹೊತ್ತು ಹೋಗುವುದನ್ನು ನೋಡಿ, ಕಂಬಕ್ಕೆ ಕಟ್ಟಲ್ಪಟ್ಟವನು ಬೇಸರದಿಂದ ಸ್ವರ ಬದಲಾಯಿಸಿ ಕೊಂಡು, "ಶಿಕ್ಷೆ ಬೇಗ ಮುಗಿಸಿರಯ್ಯಾ. ಜೇನು ರೊಟ್ಟೀ ತನ್ನೀ" ಎಂದನು. ಕೂಡಲೇ ಸಂದೇಹ ಪಟ್ಟು ಸುತ್ತಲಿದ್ದವರು ಅವನ ಮುಖದ ಮುಸುಕನ್ನು ತೊಲಗಿಸಿ, ನೋಡಿ, ಮುದುಕಿ ಮತ್ತೆ ತಮ್ಮ ಕಣ್ಣಿಗೆ ಖಾರದಪುಡಿ ಹಾಕಿ ಪಾರಾದುದನ್ನು ತಿಳಿದುಕೊಂಡರು. ರೊಟ್ಟಿಯ ಆಸೆಯಿಂದ ಮೋಸ ಹೋದುದಕ್ಕೆ ಆ ಹೊಸಬನೂ ತಾನೇ ತನ್ನ ತಲೆ ಚಚ್ಚಿಕೊಂಡನು.



ಸ್ವಲ್ಪ ಹೊತ್ತಿಗೆ ಸ್ವತಃ ಖಾಲೀದ್ ಅಲ್ಲಿಗೆ ಬಂದು, ನಡೆದ ಸಂಗತಿಯನ್ನೆಲ್ಲಾ ಕೇಳಿ, ಇದರ ಪರಿಷ್ಕಾರ ತನ್ನಿಂದಾಗುವಂತಹುದಲ್ಲವೆಂದು ತಿಳಿದನು. ಅವನು ಎಲ್ಲರನ್ನೂ ಕರೆದುಕೊಂಡು ನೇರಾಗಿ ಖಲೀಫನ ಬಳಿಗೇ ಹೋದನು.

ಹಾರೂನ್ ಅಲ್ ರಷೀದ್ ಖಲೀಫನು ಎಲ್ಲರ ಕಥೆಯನ್ನೂ ಕೇಳಿ, ಯಾರು ಯಾರಿಗೆ ಏನೇನು ನಷ್ಟವಾಯಿತೋ, ಅದನ್ನೆಲ್ಲಾ ತಾನು ಕೊಟ್ಟು ಸರಿಮಾಡುವೆನೆಂದು ಮಾತುಕೊಟ್ಟನು. ಆದರೆ ಮೊದಲು ಆ ಕಳ್ಳ ಮುದುಕಿಯನ್ನು ಹಿಡಿಯ ಬೇಕಾಗಿತ್ತು. ಖಾಲೀದ್ ಮತ್ತು ಮುಸ್ತಫಾ ಇಬ್ಬರೂ ಕೂಡಿ ಆ ಮುದುಕಿಯನ್ನು ಹಿಡಿಯ ಬೇಕೆಂದು ಖಲೀಫನ ಆಜ್ಞೆಯಾಯಿತು.

ತನ್ನಿಂದ ಆ ಕೆಲಸ ಸಾಧ್ಯವಿಲ್ಲವೆಂದು ಖಾಲೀದ್ ಹೇಳಿದುದನ್ನು ಕೇಳಿ, "ಹಾಗಾದರೆ ಆ ಕೆಲಸಕ್ಕೆ ತಕ್ಕವರನ್ನು ನೀನೇ ನೋಡು" ಎಂದನು ಖಲೀಫಾ.

"ಹೊಸದಾಗಿ ಕೋತ್ವಾಲ ಪದವಿಗೆ ಬಂದ ಅಹ್ಮದ್ ಇರುವಾಗ ಇನ್ನೊಬ್ಬರ ಮಾತೇಕೆ? ಅವನು ಪದವಿಗೆ ಬಂದ ಮೇಲೆ ಈವರೆಗೂ ಯಾರನ್ನೂ ಹಿಡಿದ ಗುರುತು ಇಲ್ಲ. ಆ ಮುದುಕಿಯನ್ನು ಹಿಡಿದರೆ ಅವನೇ ಹಿಡಿಯಬೇಕು. ಈ ಕೆಲಸ ಕೂಡಾ ಮಾಡಲಾಗದೆ ಹೋದರೆ, ಅವನ ಪ್ರಜ್ಞೆ ಮತ್ತೇಕೆ?" ಎಂದನು ಖಾಲೀದ್.

ಅದೇ ಸರಿಯೆಂದು ಖಲೀಫನು ಅಹ್ಮದನನ್ನು ಕರೆಯಿಸಿ, ಅವನೊಂದಿಗೆ ಮುದುಕಿಯ ಕಥೆಯನ್ನೆಲ್ಲಾ ಹೇಳಿ, ಅವಳನ್ನು ಹಿಡಿಯತಕ್ಕದ್ದೆಂದು ಆಜ್ಞೆ ಕೊಟ್ಟನು. ಅಹ್ಮದ್ ಆ ಕ್ಷಣವೇ ತನ್ನ ನಲುವತ್ತು ಮಂದಿ ಭಟರೊಂದಿಗೆ ಹೊರಟುಬಿಟ್ಟನು.

ಈ ಭಟರಿಗೆ ಮುಖಂಡನಾಗಿ, ಗೂನನಾದ ಅಲೀ ಎಂಬವನಿದ್ದನು. ಅವನು ತನ್ನ ಒಡೆಯನಾಧ ಅಹ್ಮದನನ್ನು ನೋಡಿ, "ಅಯ್ಯಾ, ನನ್ನದೊಂದು ಸೂಚನೆ. ನಾವು ಈ ಮುದುಕಿಯನ್ನು ಹಿಡಿಯಲಿಕ್ಕೆ ಪಟ್ಟಣದ ಹಸನ್‌ರವರ ಸಹಾಯ ಪಡೆಯುವುದು ಒಳ್ಳೇದು" ಎಂದನು.

"ಎಲೋ ಗೂನ ಮೂರ್ಖ! ನಮಗೆ ಇನ್ನೊಬ್ಬರು ಸಹಾಯ ಮಾಡುವುದೆಂದರೆ ಎಂಥ ನಾಚಿಕೆಗೇಡು! ನಾವೇನು ಕೈಲಾಗದವರೆಂದು ಕೊಂಡೆಯಾ? ಇನ್ನೊಮ್ಮೆ ಈ ಮಾತು ಹೇಳಿದರೆ ಬೆನ್ನು ಮೂಳೆಪುಡಿಯಾದೀತು! ಖಬರ್‌ದಾರ್!" ಎಂದು ಅಧಟಿದನು ಅಹ್ಮದ್.

ಆ ಮುದುಕಿಯನ್ನು ಹಿಡಿಯುವ ಭಾರವನ್ನು ತನಗೆ ಕೊಡುವುದನ್ನು ಬಿಟ್ಟು ಅಹ್ಮದನನ್ನು ನಿಯೋಜಿಸಿದುದರಿಂದ ಹಸನ್ ತನ್ನೊಳಗೇ ನೊಂದುಕೊಂಡನು. ಅಹ್ಮದನ ಪ್ರಗಲ್ಭತೆಯನ್ನು ಕೇಳಿ ತನ್ನೊಳಗೆ "ಇರಲಿರಲಿ! ನನ್ನ ಸಹಾಯ ವಿಲ್ಲದೆ ಇವನು ಆ ಮುದುಕಿಯನ್ನು ಹಿಡಿದ ಕಾಲಕ್ಕೆ ನೋಡಿಕೊಳ್ಳುತ್ತೇನೆ!" ಎಂದುಕೊಂಡನು.

ಅಹ್ಮದನು ತನ್ನ ನಲುವತ್ತು ಮಂದಿ ಭಟರನ್ನೂ ರಾಜ ಸೌಧದ ಹೊರಗೆ ವಿಶಾಲವಾಗಿದ್ದ ಮೈದಾನ ದಲ್ಲಿ ವರಿಸೆಯಾಗಿ ನಿಲ್ಲಿಸಿ, "ಧೀರಾಗ್ರೇಸರರೇ! ನಿಮ್ಮನ್ನು ನಾಲ್ಕು ಭಾಗಗಳಾಗಿ ಮಾಡುತ್ತೇನೆ. ನೀವು ನಾಲ್ಕು ದಳಗಳಾಗಿ ನಗರದ ನಾಲ್ಕು ಭಾಗ ಗಳಲ್ಲಿಯೂ ಚೆನ್ನಾಗಿ ಬೇಟೆಯಾಡಿ ಆ ಕಳ್ಳ ಮುದುಕಿಯನ್ನು ಗಾಳಿಸಬೇಕು. ನಾಳೆ ಮಧ್ಯಾಹ್ನದ ಹೊತ್ತಿಗೆ ಎಲ್ಲರೂ ಮುಸ್ತಫಾ ಬೀದಿಯಲ್ಲಿರುವ ಸಾರಾಯಿ ಅಂಗಡಿಯ ಹತ್ತಿರ ಸೇರಿಕೊಳ್ಳಬೇಕು. ನಾನು ಅಲ್ಲಿಗೆ ಬಂದು ನಿಮ್ಮ ಅನುಭವವನ್ನು ಕೇಳುತ್ತೇನೆ." ಎಂದನು.

ಆ ರೀತಿಯಾಗಿ ನಾಲ್ಕು ದಳಗಳೂ ನಾಲ್ಕು ದಿಕ್ಕುಗಳಿಗೆ ಹೊರಟವು. ಆಮೇಲೆ ಅಹ್ಮದನೂ ಸ್ವತಃ ಮುದುಕಿಯನ್ನು ಪತ್ತೇಮಾಡಿ ಹಿಡಿಯಲು ಹೊರಟನು. ಖಲೀಫನು ತನ್ನನ್ನು ಹಿಡಿಯಲು ಕೋತ್ವಾಲ ಪ್ರಮುಖನಾದ ಅಹ್ಮದನನ್ನು ನಿಯೋಜಿ ಸಿದ ಸಂಗತಿ ದಿಲ್ಲೈಲಾಳಿಗೆ ತಿಳಿಯಿತು. ಆದರಿಂದ ಅವಳು ಸ್ವಲ್ಪವೂ ಹೆದರಲಿಲ್ಲ. ಅವಳು ತನ್ನ ಮಗಳನ್ನು ನೋಡಿ ನಗುತ್ತ "ಮಗಳೇ, ನನ್ನನ್ನು ಹಿಡಿಯ ಬಲ್ಲವನೂ ಅಂತ ಒಬ್ಬ ಇದ್ದರೆ ಹಸನ್ ಒಬ್ಬನೇ. ಖಲೀಫರು ಅವನನ್ನು ಈ ಕೆಲಸಕ್ಕೆ ಉಪಯೋಗಿಸದೆ ಬಿಟ್ಟಿದ್ದು ನಮ್ಮ ಅದೃಷ್ಟ ಅನ್ನು. ಇನ್ನು ಈ ಅಹ್ಮದನನ್ನು ನೀನೊಬ್ಬಳು ಕೂಡಾ ಗೋಳಾಡಿಸ ಬಹುದು" ಎಂದಳು. "ಹಾಗಾದರೆ ಈಸಾರಿ ನಾನು ಹೋಗಿ ಅವರನ್ನು ಮೋಸಪಡಿಸಿ ಬರಲೇ ಅಮ್ಮಾ?" ಎಂದು ಜೇನಾಬ್ ತಾಯಿಯನ್ನು ಕೇಳಿದಳು.

"ಹೋಗಿ ಬಾ ಕಂದಾ. ನಾನು ಸ್ವಲ್ಪ ದಣಿವಾರಿಸಿ ಕೊಳ್ಳುತ್ತೇನೆ" ಎಂದಳು ದಿಲ್ಲೈಲಾ.

ಜೇನಾಬ್ ಅತ್ಯುತ್ಸಾಹದಿಂದ ತನ್ನನ್ನು ಅಲಂಕರಿಸಿ ಕೊಂಡು, ಕನ್ನಡಿಯಂತಹ ಅತಿತೆಳ್ಳಗಿನ ಮೇಲು ಮುಸುಗಿನೊಂದಿಗೆ ಹೊರಟಳು. ಅವಳು ಮುಸ್ತಫಾ ಬೀದಿಗೆ ಪ್ರವೇಶಿಸಿ, ಹಾಜ್ ಕರೀಂ ಎಂಬವನು ನಡೆಸುವ ಸಾರಾಯಿ ಖಾನೆಗೇ ಹೋಗಿ, ಹಾಜ್ ಕರೀಂಗೆ ಎರಡು ಸಲಾಮುಗಳನ್ನು ಮಾಡಿ, "ಕೆಲವು ಮಂದಿ ಆಪ್ತ ಮಿತ್ರರು ಇಲ್ಲಿಗೆ ಬರುತ್ತಾರೆ. ಅವರು ಸಾಧಾರಣ ಮನುಷ್ಯರೊಂದಿಗೆ ಸಂಬಂಧವಿಲ್ಲದಹಾಗೆ ಕಾಲಕ್ಷೇಪ ಮಾಡಬೇಕಾಗಿದೆ. ಆದ್ದರಿಂದ ನಿಮ್ಮಲ್ಲಿರುವ ದೊಡ್ಡದೊಂದು ಕೋಣೆಯನ್ನು ಒಂದು ದಿನದ ಮಟ್ಟಿಗೆ ಬಾಡಿಗೆಗೆ ಕೊಡಬೇಕು. ಐದು ದೀನಾರಾ ತೆಗೆದುಕೊಳ್ಳಿರಿ" ಎಂದಳು. ಹಾಜ್ ಕರೀಂ ಜೇನಾಬಳ ಅಂದಚಂದ ಮಧುರ ಮಾತು ವೊದಲಾದುವು ಗಳಿಂದ ಆಕರ್ಷಿತ ನಾಗಿ "ಆಗಲಿ. ಬಾಡಿಗೆಯೇ ಬೇಕಾಗಿಲ್ಲ. ಇರುವ ಸಾರಾಯಿ ಪೂರಾ ಖರ್ಚಾದರೇ ಸಾಕು" ಎಂದನು.

(ಇನ್ನೂ ಇದೆ)






ಸಮೀಪದಲ್ಲಿದ್ದು ದೂರ ದೂರ ಆಕಾಶದಲ್ಲಿ ಓಡುತ್ತಾ ಹೋದ ಪುತ್ರ ಗಣಪತಿಯ 'ಅಮ್ಮಾ' ಧ್ವನಿಯನ್ನು ಕೇಳಿ, ಒಳಗಿನಿಂದ ಪಾರ್ವತಿ ಓಡುತ್ತಾ ಬಂದು, ತಲೆಯಿಲ್ಲದೆ ಬಿದ್ದಿದ್ದ ಬಾಲಕನನ್ನು ನೋಡಿ, ಶಿವನನ್ನು ಚುರು ಚುರು ನೋಡುತ್ತ, "ಎಂಥಾ ಕೆಲಸ ಮಾಡಿದೆ ಮಹಾದೇವಾ! ನಮ್ಮ ಪುತ್ರನ ತಲೆ ತರಿದೆಯಾ? ನನ್ನ ಪತಿ ಪುತ್ರ ಹಂತಕ! ಪುತ್ರ ಹಂತಕ! ಇನ್ನೇನು ಗತಿಯೋ!" ಎಂದು ಚಕ್ಕನೆ ಕುಸಿಕುಳಿತು ಘೋರನೆ ಶೋಕಿಸ ತೊಡಗಿದಳು.

ಅದುವರೆಗೂ ಸ್ತಂಭೀಭೂತರಾಗಿ ನಿಂತಿದ್ದ ಗುಂಪಿನವರೊಳಗೆ ಕಲಕಲ ರವವೆದ್ದು ಸಮುದ್ರ ಘೋಷದಂತೆ ಕೇಳ ತೊಡಗಿತು. ದೊಡ್ಡ ತಪ್ಪು ಮಾಡಿ ನಿಂತವನಂತಿರುವ ಶಿವನನ್ನು ಎಲ್ಲರೂ ನೋಡುತ್ತಿದ್ದರು. ಈ ಪರಿಸ್ಥಿತಿಯನ್ನು ನೋಡುತ್ತಿದ್ದಂತೆ ಶಿವನ ಶರೀರದಿಂದ ಬೆವರಿಳಿಯ ತೊಡಗಿತು. ಮುಖವು ಕಪ್ಪಿಟ್ಟಿತು. ತಡವರಿಸುವ ಶಬ್ದದಿಂದ, "ನನಗೆ ತಿಳಿಯದ ಪುತ್ರನೆ? ಅದು ಹೇಗೇ!" ಎಂದನು, ಎಲ್ಲರಿಗೂ ಕೇಳುವಂತೆ ತನಗೆ ತಾನೇ.

ಆಗ ಪಾರ್ವತಿ ತನ್ನನ್ನು ಸಮಾಳಿಸಿಕೊಂಡು, ತಾನು ಮಾಡಿದ ಸ್ನಾನದ ಸುಗಂಧ ನಲುಗು ಮುದ್ದೆಯಿಂದ ಯಾವ ವಿಧವಾಗಿ ಪುತ್ರಗಣಪತಿ ಹುಟ್ಟಿದನೆಂಬುದನ್ನು ಹೇಳಿದಳು,

ಅದನ್ನು ಕೇಳಿ ಶಿವನು ತುಟಿ ಕಡಿದುಕೊಂಡು, "ಓ! ನಿನ್ನ ಸ್ವಂತ ಮಗಾ ಅನ್ನು. ಆದ್ದರಿಂದಲೇ ಅಮ್ಮ ಅಮ್ಮ ಅನ್ನುತ್ತಾ ತುಂಬಾ ಬಡಾಯಿ ಬಡಿದ. ನಮ್ಮ ಪುತ್ರನೆಂದೆಯಲ್ಲಾ? ನನಗೆ ಪುತ್ರನು ಹೇಗಾಗುತ್ತಾನೆ?" ಎಂದನು.

ಪಾರ್ವತಿಯ ಮುಖ ಬಿಳಿಚಿಕೊಂಡಿತು. ಏನು ಹೇಳುವುದೆಂದು ಅವಳಿಗೆ ತಿಳಿಯಲಿಲ್ಲ. ಆಗ ವಿಷ್ಣು ಬ್ರಹ್ಮನಿಗೆ ಸನ್ನೆ ಮಾಡಿದನು. ಕೂಡಲೇ ಬ್ರಹ್ಮನು ಮುಂದಕ್ಕೆ ಬಂದು, "ಹೌದು. ಪಾರ್ವತಿ ಹೇಳಿದುದರಲ್ಲಿ ತಪ್ಪೇನಿಲ್ಲ. ಯಾವಾಗ ಶಿವನು ಪಾರ್ವತಿಯ ಕೈಯನ್ನು ಹಿಡಿದನೋ ಆಗಲೇ ಶಿವನ ತೇಜಸ್ಸು ಪಾರ್ವತಿಯ ಶರೀರದೊಳಗೆಲ್ಲಾ ಪ್ರವೇಶಿಸಿ ಪುಲಕಿತ

೪. ಮಹಾಗಣಪತಿ




ಗೋಳಿಸಿದೆ. ಆಗಿನಿಂದಲೇ ಶಿವನು ಪಾರ್ವತಿಯೊಂದಿಗೆ ಅರ್ಧ ಭಾಗವಾಗಿ ಅಂತರ್ಲೀನನಾಗಿಯೇ ಇದ್ದಾನೆ. ಪುತ್ರ ಗಣಪತಿ ಶಿವನ ಪುತ್ರನೂ ಹೌದು" ಎಂದು ಈ ಕಡೆಯ ಮಾತನ್ನು ತನ್ನ ನಾಲ್ಕು ಮುಖಗಳಿಂದಲೂ ನಾಲ್ಕು ದಿಕ್ಕುಗಳೂ ಕೇಳುವಂತೆ ಹೇಳಿದನು.

ಶಿವನು ಕೈ ಕೈ ಹಿಸುಕಿಕೊಂಡು ದಿಕ್ಕುಗಳನ್ನು ನೋಡುತ್ತಿರಲು, ಪಾರ್ವತಿ ಮಗನ ಕಳೇಬರದ ಮೇಲೆ ಬಿದ್ದು ಅಳುತ್ತಿರಲು, ಆಕಾಶದಿಂದ ಅದೇ ಬಾಲಗಣಪತಿಯ ಸ್ಪಷ್ಟ ಶಬ್ದವು ಹೀಗೆ ಹೊರಟಿತು : "ಆಗಬೇಕಾದ್ದೇ ಆಯಿತು ! ಉತ್ತರ ದಿಕ್ಕಿಗೆ ತಲೆಯಿಟ್ಟು ನಿದ್ರಿಸುವ ತಲೆಯನ್ನು ತಂದು ನನಗೆ ಅಂಟಿಸಿರಿ. ನಾನು ಏಳುತ್ತೇನೆ !"

ಶಿವನ ನೋಟ ಮಾತ್ರದ ಆಜ್ಞೆಯಿಂದ ದೇವತೆಗಳೂ, ಪ್ರಮಥಗಣಗಳೂ ಹುಡುಕುತ್ತಾ ಹೊರಟರು. ಎಲ್ಲಿ ಹುಡುಕಿದರೂ ಉತ್ತರದಿಕ್ಕಿಗೆ ತಲೆಯಿಟ್ಟು ಮಲಗಿದವರಾರೂ ಕಾಣಲಿಲ್ಲ. ಹೀಗೆ ಹುಡುಕುತ್ತಾ ಹೋಗುತ್ತಿರಲು, ಸಹ್ಯಾದ್ರಿಯ ಪರ್ವತದ ಮೇಲೆ, ಬಿಲ್ವವನದಲ್ಲಿ ಬಿಳಿಯಾದ ಒಂದು ಆನೆಯಕರು ಮಾತ್ರ ಉತ್ತರ ದಿಕ್ಕಿಗೆ ತಲೆಯಿಟ್ಟು ನಿದ್ರಿಸಿಕೊಂಡಿತ್ತು. ನಿದ್ದೆಯಲ್ಲಿದ್ದರೂ ಶಿವಸ್ಮರಣೆ ಮಾಡಿಕೊಂಡಿತ್ತು ಅದು !

ಅದು ಸಾಧಾರಣ ಆನೆಯಕರುವಲ್ಲ. ದೇವಲೋಕದ ದೇವತಾ ಗಜವಾದ ಐರಾವತದ ಕುಮಾರ ಗಜೇಂದ್ರನೇ ಈ ಗಜಬಾಲ. ಐರಾವತವು ಇಂದ್ರನಿಗೆ ವಾಹನ, ಒಂದುಸಾರಿ ಇಂದ್ರನು ಐರಾವತದ ಮೇಲೆ ಪ್ರಯಾಣಿಸುತ್ತಿದ್ದಾಗ, ಕುಮಾರ ಗಜೇಂದ್ರನು ಇಂದ್ರನನ್ನು ಲಕ್ಷ್ಯಮಾಡದೆ ತನ್ನ ಆಟದಲ್ಲಿ ತಾನಿರುವುದನ್ನು ನೋಡಿ, ಇಂದ್ರನು ಕೋಪದಿಂದ, "ಕೇವಲ ನನ್ನ ವಾಹನನ ಮಗನಿಗೆ ಇಷ್ಟು ಗರ್ವವೇ ! ಒಳ್ಳೆಯ ಮಾತಿನಲ್ಲಿ ಅಡ್ಡಬೀಳು !" ಎಂದು ದುರ್ಭಾಷೆಗಳಿಂದ ಬೈದನು.

ಕುಮಾರ ಗಜೇಂದ್ರನು ಶಾಂತವಾಗಿ, "ನನ್ನ ತಂದೆ ತನ್ನ ವಿಧಿಯನ್ನು ತನ್ನ ಪಾಡಿಗೆ ಮಾಡಿಕೊಂಡಿರುವಾಗ, ನನ್ನ ಗೊಡವೆಗೆ ಬರುವ ಅಗತ್ಯವೇನಿದೆ ? ನನ್ನನ್ನು ಕೂಡಾ ಸೇವಕ ಭಾವದಿಂದ ನೋಡುವುದು ಯಾವ ನ್ಯಾಯ ? ನಾನು ನಿನಗೆ ಹೆದರುವ ಅಗತ್ಯವಾದರೂ ಏನಿದೆ ? ನನಗೇನೂ ನಿನ್ನಿಂದ ಆಗಬೇಕಾದ್ದಿಲ್ಲ. ಸುಮ್ಮನೆ ಅಡ್ಡಬೀಳಬೇಕೆ ?" ಎಂದನು.

"ನಾನು ದೇವೇಂದ್ರನೆಂಬುದನ್ನು ನೆನಪಿಟ್ಟುಕೊಂಡು ಮಾತಾಡೋ ಆನೇ ಮಗನೇ !" ಎಂದನು ಇಂದ್ರನು ದರ್ಪದಿಂದ.

"ಹೌದು. ನಾನು ಆನೆಮಗ ಗಜೇಂದ್ರ. ಇನ್ನೊಬ್ಬನು ನಾಗೇಂದ್ರನಾದರೆ, ಮತ್ತೊಬ್ಬನು ಪಕ್ಷೀಂದ್ರ. ಹೀಗೆ ಎಷ್ಟುಮಂದಿ ಇಂದ್ರರಿದ್ದರೂ ಇದ್ದಾರು. ನೂರು ಯಜ್ಞ ಮಾಡಿದರೆ ಸಾಕು.

ಇಂದ್ರ ಪದವಿ ಸಿಕ್ಕಿ ಬಿಡುತ್ತದೆ. ತಪಸ್ಸಿನಿಂದಲೂ ಸಾಧಿಸಿಕೊಳ್ಳಬಹುದು. ಆದ್ದರಿಂದಲೇ ಯಾರು ಎಲ್ಲಿ ಏನು ಧ್ಯಾನದಲ್ಲಿದ್ದರೂ ನಿನಗೆ ಕೆಟ್ಟ ಭಯ! ಇಂದ್ರತ್ವವು ಅದೇನು ದೊಡ್ಡ ಪದವಿಯೆಂದು ಕೊಂಡು ಯಾವ ಜ್ಞಾನದಿಂದ ಬೀಗುತ್ತಿರುವೆಯೋ! ಅದೆಂಥ ಇಂದ್ರ ಜ್ಞಾನದ ತಲೆಯೋ! ನಿನ್ನಂಥವ ನಿಂದಲೇ ಶ್ರೇಷ್ಠವಾದ ಇಂದ್ರ ಪದವಿಗೆ ಕೆಟ್ಟ ಹೆಸರು ಬಂತು" ಎಂದನು ಗಜೇಂದ್ರ.

ಇಂದ್ರನು ಕೋಪಾತಿರೇಕದಿಂದ ಶಪಿಸುತ್ತ, "ಹೋಗಾಚೆ! ನಿನ್ನ ತಲೆ ತರಿದು ಬೀಳಾ!" ಎಂದು ಬೈದನು.

ಗಜೇಂದ್ರನು ನಗುತ್ತ, "ಶಿವನಾಜ್ಞೆಯಿಲ್ಲದೆ ಒಂದು ಇರುವೆಯೂ ಕಡಿಯಲಾರದು. ಆ ತಲೆಯ ಮುಂದೆ ನಿನ್ನ ತಲೆ ಬಾಗುವುದೇನೋ ಆ ಶಿವನಿಗೇ ಗೊತ್ತು!" ಎಂದನು.

ಕುಮಾರ ಗಜೇಂದ್ರನು ದೊಡ್ಡ ಜ್ಞಾನಿಯೆಂದು ಅರಿಯದ ಗರ್ವಾಂಧನಾದ ಇಂದ್ರನು, "ಓಹೋ! ನನಗೇ ಭಕ್ತಿ ಕಲಿಸುವೆಯಾ? ಆ ಶಿವನನ್ನೇ ನಂಬಿ ಭೂಮಿಯಲ್ಲಿ ಬಿದ್ದಿರು." ಎಂದು ಗಜೇಂದ್ರನನ್ನು ಸ್ವರ್ಗದಿಂದ ಕೆಳಗೆ ದೂಡಿಬಿಟ್ಟನು, ಕುದೂರ ಗಜೇಂದ್ರನು ಸಹ್ಯಾದ್ರಿಯ ಮೇಲೆ ಬಿದ್ದು ಶಿವ ಸ್ಮರಣೆ ಮಾಡುತ್ತಾ, ಶಿವನ ನಿವಾಸವಾದ ಕೈಲಾಸ ವಿರುವ ಉತ್ತರ ದಿಕ್ಕಿಗೇ ತಲೆಯಿಟ್ಟುಕೊಂಡು ಮಲಗುತ್ತಿದ್ದನು,

ನಿದ್ದೆಯಲ್ಲಿಯೂ ಶಿವಸ್ಮರಣೆಯನ್ನು ಬಿಡದಿರುವ ಆ ಗಜೇಂದ್ರನ ತಲೆಯನ್ನು ದೇವತೆಗಳು ಕಡಿದು ತೆಗೆದುಕೊಂಡು ಹೋಗಿ ಶಿವನ ಮುಂದೆ ಇಟ್ಟರು. ಶಿವನು ಆ ತಲೆಯನ್ನು ಬಾಲನ ಕಳೇಬರಕ್ಕೆ ಅಂಟಿಸಿದ ಕೂಡಲೇ ಪುತ್ರ ಗಣಪತಿ ಆನೆಯ ಮುಖದೊಂದಿಗೆ ನವೋತ್ಸಾಹದಿಂದ ಸೊಂಡಿಲಾಡಿ ಸುತ್ತಾ ಎದ್ದುನಿಂತು ಎಲ್ಲರನ್ನೂ ನೋಡಿ ತಲೆ



ಯಾಡಿಸಿದನು. "ಬಂದೆನಲ್ಲಾ! ಇನ್ನೇಕೆ ದುಃಖಿಸುವೆ ಅಮ್ಮಾ?" ಎಂದನು ಪಾರ್ವತಿಯನ್ನು ನೋಡಿ,

"ನನ್ನ ಮುದ್ದು ಮಗನಿಗೆ ಆನೆಯ ಮುಖವೇ ನಿದು? ನೋಡಲಾರೆ!" ಎಂದು ಪಾರ್ವತಿ ದುಃಖ ದಿಂದ ಕಣ್ಣು ಮುಚ್ಚಿಕೊಂಡಳು.

ಆಗ ಗಜಮುಖನು ಕಿವಿಗಿಂಪಾದ ಮುದ್ದು ಮಾತುಗಳಿಂದ, "ಅಮ್ಮಾ, ಏಕೆ ಚಿಂತಿಸುವೆ? ನಡೆಯುಬೇಕಾದುದೆಲ್ಲಾ ನಿರ್ವಿಘ್ನವಾಗಿಯೇ ನಡೆದಿದೆ ಯಮ್ಮಾ? ಆ ದಿನ ಮದುವೆಯಾದ ಕೂಡಲೇ ನೀವಿಬ್ಬರೂ ಗೋಡೆಯ ಮೇಲೆ ಆನೆಗಳ ಚಿತ್ರವನ್ನು ನೋಡಿದಿರಿ. ಆಗ ಕಂಡು ಬಂದ ನನ್ನನ್ನು ಪುತ್ರ ವಾತ್ಸಲ್ಯದಿಂದ ನೋಡಿದಿರಲ್ಲವೆ? ಅವನೇ ನಾನಲ್ಲವೇ? ವಿಘ್ನೇಶ್ವರ! ನನ್ನ ನೆನಪಿಲ್ಲವೇ ಅಮ್ಮಾ?" ಎಂದನು.

ಪಾರ್ವತಿಯ ಮನೋನೇತ್ರಕ್ಕೆ ಆ ವಿಶೇಷವೆಲ್ಲಾ ಕಾಣಿಸಿತು, ಶಿವನಿಗೂ ಹಾಗೆಯೇ ವಿಘ್ನೇಶ್ವರನ



ಆಮೇಲೆ ಶಿವನು ವಿಘ್ನೇಶ್ವರನ ಮುಂದೆ ತಲೆವಾಗಿ, "ವಿಘ್ನೇಶ್ವರಾ, ಎಲ್ಲರೂ ಕೂಡಿರುವ ಈ ಒಳ್ಳೆಯ ಸಮಯದಲ್ಲಿ ನಿನ್ನ ವಿಶ್ವರೂಪವನ್ನಿಷ್ಟು ತೋರಿಸು ನೋಡುತ್ತೇನೆ !" ಎಂದು ಅಪೇಕ್ಷಿಸಿದನು.

ಆಗ ವಿಘ್ನೇಶ್ವರನು ಆಕಾಶದ ಕಡೆಗೆ ಬೆಳೆದು ಮಹಾರೂಪನಾಗಿ, ಐದು ತಲೆಗಳೊಂದಿಗೆ ಕಾಣ ತೊಡಗಿದನು. ಭೂಮಿ, ನೀರು, ಅಗ್ನಿ, ಗಾಳಿ, ಆಕಾಶವೆಂಬ ಪಂಚಭೂತಗಳ ಬಣ್ಣಗಳಾದ ಹಸುರು, ಮೇಘವರ್ಣ, ಕೆಂಪು, ಬಿಳುವು, ನೀಲ ಬಣ್ಣಗಳಿಂದ ಕಾಣುವ ಐದು ಗಜ ಮುಖಗಳು ಆ ವಿಶ್ವರೂಪದಲ್ಲಿ ಕಂಡು ಬಂದುವು. ಆ ತಲೆಗಳ ಮೇಲೆ ನಕ್ಷತ್ರಗಳು ಶಿರೋ ಪುಷ್ಪಗಳಾಗಿ ಹೊಳೆಯುತ್ತಿದ್ದುವು. ವಿಘ್ನೇಶ್ವರನ ದೊಡ್ಡದಾದ ಗುಂಡೋದರವು ಮಿರಿ ಮಿರಿ ಕಾಂತಿಯೊಂದಿಗೆ ಆಕಾಶದ ಹಾಗೆಯೇ ವಿಸ್ತಾರ ವಾಗಿ ಕಾಣುತ್ತಿತ್ತು. ಅವನಿಗಿರುವ ಅನೇಕ ಕೈಗಳಲ್ಲಿ ಅಂಕುಶ, ಕೊಡಲಿ, ಪಾಶ, ಕಲಶಗಳಲ್ಲದೆ ತ್ರಿಮೂರ್ತಿ ಗಳಿಗೆ ಸೇರಿದ ಶಂಖ ಚಕ್ರ ಗದಾಪದ್ಮಗಳೂ, ಡಮರುಕ, ತ್ರಿಶೂಲ, ವಜ್ರಾಯುಧಗಳೂ, ಕಮಂಡಲು, ವೀಣೆ, ಖಡ್ಗಗಳೂ, ಈಟಿ, ಶಕ್ತಿ ದೊದಲಾದುವುಗಳೂ ಇದ್ದುವು. ತಲೆಯೆತ್ತಿ ಅವನ ಮಹಾರೂಪವನ್ನು ನೋಡುತ್ತಿರುವವರೆಲ್ಲಾ, ಕಣ್ಣು ಚುಚ್ಚುವಂತಹ ಅವನ ತೇಜಸ್ಸಿನ ಕಾಂತಿಯನ್ನು ನೋಡಲು ಶಕ್ತಿ ಸಾಲದೆ ತಲೆ ಬಗ್ಗಿಸಿಕೊಂಡರು. ಆಗ ಎಲ್ಲರ ಹೃದಯಗಳೂ ಹಗುರಾಗಿ ಮನಸ್ಸಿಗೆ ಹರ್ಷದ ಅನುಭವವಾಯಿತು.

ಜ್ಞಾಪಕ ಬಂದಿತು. "ವಿಘ್ನೇಶ್ವರಾ ! ನಮಗೆ ಪುತ್ರ ಸಾಗಿ ಅವತರಿಸಿ ದವನು ನೀನೇ ಏನು? ಇದಕ್ಕಾಗಿಯೇ ನನ್ನನ್ನು ಹಾಗೆಲ್ಲಾ ತಡೆದು ಜಗಳಕ್ಕೆ ಕಾಲುಕೆದರಿ ನನಗೆ ಕೋಪ ಬರಿಸಿದೆಯಾ ? ಈಗ ನನಗೆಲ್ಲಾ ಗೊತ್ತಾ ಗುತ್ತದೆ ! ನನ್ನನ್ನೇ ಆಡಿಸಿ ಬಿಟ್ಟ ನಿನ್ನ ಲೀಲೆ ಅದ್ಭುತವಪ್ಪಾ ! ಅತ್ಯದ್ಭುತ!" ಎಂದನು ಶಿವ ಆನಂದಬಾಷ್ಪ ಉದುರಿಸುತ್ತ.

"ಇಲ್ಲದಿದ್ದರೆ ಗಜಾಸುರನಿಗೆ ನೀನು ಕೊಟ್ಟ ವಾಗ್ದಾನವು ಹೇಗೆ ನೆರವೇರಿತು ?" ಎಂದು ವಿಘ್ನೇಶ್ವರನು ನೆನಪು ಮಾಡಿದನು.

"ಆಹಾ ! ನೆನಪು ಮಾಡಿದೆ ! ನಾನು ಗಜ ಚರ್ಮವನ್ನು ಕೂಡಾ ಧರಿಸಿಕೊಳ್ಳಬೇಕಾಗಿದೆ. ಆನೆಯ ತಲೆಯಂತೂ ನನ್ನ ಕುಮಾರನಿಗೆ ಬಂದೇ ಬಂದಿತು. ಗಜಾಸುರನ ಭಕ್ತಿಯೂ ಸಾರ್ಥಕವಾಯಿತು !" ಎಂದು ಹೇಳಿ ಶಿವನು ಗಜ ಚರ್ಮವನ್ನು ತರಿಸಿ ಸೊಂಟಕ್ಕೆ ಬಿಗಿದುಕೊಂಡನು.

ಆನಂದದಿಂದ ಉತ್ಸಾಹಿತಳಾದ ಸರಸ್ವತಿ ವೀಣೆ ಯನ್ನೆತ್ತಿಕೊಂಡು ವಿಘ್ನೇಶ್ವರನಿಗೆ ಪ್ರಿಯವಾದ ಹಂಸಧ್ವನಿ ರಾಗವನ್ನು ಮೀಂಟಿಸ ತೊಡಗಿದಳು. ಆರಾಗವು ಅಲೆಯಾಗಿ ಸಾಗುತ್ತಿರಲು, ಕೂಡಲೇ ನಾರದನು ತನ್ನ ತಂಬೂರಿಯಿಂದ ಮಧ್ಯೇ ಮಧ್ಯೇ ಮಾಯಾ ಮಾಳವ ಗೌಳ ರಾಗವನ್ನು ಜೋಡಿಸಿದನು.



ಇದರಿಂದ ಎಲ್ಲರೂ ಓಲಾಡುತ್ತಿರಲು, ಶಿವನು ಆನಂದಪರವಶತೆಯಲ್ಲಿ ನಟರಾಜನಾಗಿ ತಾಂಡವ ನೃತ್ಯಕ್ಕೆ ತೊಡಗಿದನು.

ಇಂದ್ರನೊಂದಿಗೆ ಮುಕ್ಕೋಟಿ ದೇವತೆಗಳು ಕೂಡಾ ತಲೆ ಬಗ್ಗಿಸಿ ಮಹಾ ಗಜ ಮುಖನಿಗೆ ನಮಸ್ಕಾರ ಮಾಡಿದರು. ಆಗ ಇಂದ್ರನ ಕಿವಿಗಳಲ್ಲಿ 'ಆ ತಲೆಯ ಮುಂದೆ ನಿನ್ನ ತಲೆ ಬಾಗುವುದೇನೋ' ಎಂದು ಕುಮಾರ ಗಜೇಂದ್ರನು ಹೇಳಿದ ಮಾತು ಗಿಂಗುರುಗುಟ್ಟಿತು. ಪುತ್ರ ಗಣಪತಿಗೆ ಅಂಟಿಸಿದ ತಲೆ ಕುಮಾರ ಗಜೇಂದ್ರನದೆಂದು ಇಂದ್ರನಿಗೆ ಗೊತ್ತಿತ್ತು. ಇಂದ್ರನು ಕಿವಿಗಳನ್ನು ಹಿಡಿದುಕೊಂಡು ಮೂರು ಸಾರಿ ಮುಂಡುಗಾಲೂರಿ ಮಣಿದು ಗಲ್ಲಬಡೆದು ಕೊಂಡು ಸಾಷ್ಟಾಂಗ ನಮಸ್ಕಾರಮಾಡಿ "ಗಜೇಂದ್ರಾ! ನೀನು ಮಹಾಜ್ಞಾನಿ, ನಾನು ಕೇವಲ ಅಜ್ಞಾನಿ. ನನ್ನ ಗರ್ವವನ್ನು ಕ್ಷಮಿಸು!" ಎಂದು ಮನಸ್ಸಿನೊಳಗೇ ಪ್ರಾರ್ಥಿಸಿಕೊಂಡನು.

ದೇವತೆಗಳೆಲ್ಲಾ ಇಂದ್ರನು ಮಾಡಿದ ರೀತಿಯಲ್ಲಿಯೇ ಮಹಾಗಣಪತಿಗೆ ನಮಸ್ಕಾರ ಮಾಡಿದರು. ಆಮೇಲೆ ವಿಶ್ವರೂಪ ತಳೆದ ವಿಘ್ನೇಶ್ವರನನ್ನು ನೋಡಿ ಶಿವನು, "ವಿಘ್ನೇಶ್ವರಾ, ನಿನ್ನ ಈ ರೂಪಕ್ಕೆ ಎಷ್ಟೋ ವಿಶೇಷಾರ್ಥಗಳಿರುವಂತೆ ನಮಗೆ ಕಾಣುತ್ತದೆ. ನಾವೆಲ್ಲಾ ಅದನ್ನು ಸ್ಪಷ್ಟವಾಗಿ ತಿಳಿದು ಕೊಳ್ಳಬೇಕೆಂಬ ಕುತೂಹಲದಲ್ಲಿದ್ದೇವೆ. ಹೇಳುವೆಯಾ?" ಎಂದನು.

ಅದಕ್ಕೆ ವಿಘ್ನೇಶ್ವರನು "ಮಹಾದೇವನಾದ ತಂದೆಯೇ! ಈ ವಿಶ್ವವು ಶಿವಭಕ್ತರ ಸಮ್ಮೇಳನವಾದುದು. ವಿಶ್ವದ ಜನನೀಜನಕರಾದ ಪಾರ್ವತೀ ಶಿವರ ಪುತ್ರನಷ್ಟೇ ನಾನು. ನನ್ನ ವಿಶೇಷಗಳೆಲ್ಲವೂ ಅವರ ಮಹತ್ವದಿಂದ ಪ್ರಸಾದಿಸಲ್ಪಟ್ಟುವು. ಅಂಥವರಿಗೆ ಪ್ರಣಾಮ ಮಾಡುತ್ತೇನೆ" ಎಂದು ಕೈ ಜೋಡಿಸಿ ಸುಮ್ಮನಾದನು. ವಿಘ್ನೇಶ್ವರನ ವಿನಯ ವಿಧೇಯತೆಗಳಿಗೆ ಎಲ್ಲರೂ ಬೆರಗಾಗಿ ತಲೆದೂಗಿದರು,

ಆಗ ಬ್ರಹ್ಮನು ಮುಂದೆ ಬಂದು ಎಲ್ಲರನ್ನೂ ನೋಡಿ ಹೀಗೆಂದನು: "ಮಹಾವಿಷ್ಣು ಮತ್ಸ್ಯಾವತಾರವನ್ನೆತ್ತಿ ಸೋಮಕಾಸುರನನ್ನು ಸಂಹರಿಸಿ ವೇದಗಳನ್ನು ಭದ್ರಪಡಿಸಿದನು. ಆಗ ವಿಘ್ನೇಶ್ವರನು ತುಂಬಿದ ಚಂದ್ರನಂತೆ ಕಾಂತಿಬೀರುತ್ತ ನನ್ನ ಮುಂದೆ ಸಾಕ್ಷಾತ್ಕರಿಸಿ ಅವುಗಳನ್ನು ನನಗೆ ಒಪ್ಪಿಸಿದನು. ಆಗಷ್ಟೇ ನನಗೆ ಜ್ಞಾನಸಿದ್ಧಿಯುಂಟಾಯಿತು, ವಿಘ್ನೇಶ್ವರನನ್ನು ಕುರಿತು ಅನೇಕ ವಿಷಯಗಳನ್ನು ತಿಳಿದುಕೊಂಡೆನು. ಸಂಕಲ್ಪ ಸಿದ್ಧಿಗೆ ಮೂಲನಾದ ವಿಘ್ನೇಶ್ವರನನ್ನು ಧ್ಯಾನಿಸಿ ಸಕ್ರಮವಾಗಿ ಸೃಷ್ಟಿ ಕಾರ್ಯ ಸಾಧಿಸಲು ಸಾಧ್ಯವಾಯಿತು.

"ವಿಘ್ನೇಶ್ವರನು ವಿರಾಟ್ ಸ್ವರೂಪನು. ಹೀಗೆ ವ್ಯಾಪಿಸಿಕೊಂಡಿರುವವನಾದುದರಿಂದಲೇ ವಿಷ್ಣುವೆನಿಸಿಕೊಂಡಿದ್ದಾನೆ. ಶುಕ್ಲಾಂಬರಧರನಾದ ಈ ವಿಷ್ಣುವನ್ನು ಧ್ಯಾನಿಸಿಯೇ ಯಾವ ಕಾರ್ಯವನ್ನಾದರೂ



ನೆರವೇರಿಸಬೇಕು. ಆಕಾಶ, ಗಾಳಿ, ಅಗ್ನಿ, ನೀರು, ಮಣ್ಣು ಎಂಬ ಪಂಚ ಮಹಾಭೂತಗಣಗಳಿಗೆ ಅಧಿಪತಿಯಾದುದರಿಂದ ವಿಘ್ನೇಶ್ವರನು ಮಹಾ ಗಣಾಧಿಪತಿಯಾಗಿದ್ದಾನೆ, ಲಕ್ಷ್ಮೀ ಸರಸ್ವತಿಯರ ನಿಲಯವಾಗಿ ಅವನ ಮಧ್ಯಭಾಗವಿರುತ್ತದೆ. ವಿಶ್ವರೂಪದಲ್ಲಿ ಕಾಣುವ ವಿಘ್ನೇಶ್ವರನ ಐದು ತಲೆಗಳೂ ಶ್ವೇತನೀಲ, ಊದಾ, ಕೆಂಪು. ಶ್ಯಾಮ ನೀಲ, ಹಸುರು ಬಣ್ಣಗಳಲ್ಲಿ ಪಂಚಭೂತಗಳಿಗೆ ಪ್ರತಿರೂಪಗಳಾಗಿವೆ.

"ಆನೆಯ ತಲೆ ಬಲಕ್ಕೂ ಮೇಧಸ್ಸಿಗೂ ಚಿಹ್ನೆ. ಲಂಬೋದರವಿದ್ದ ಮಾತ್ರಕ್ಕೆ ದೊಡ್ಡಸ್ತಿಕೆಬಾರದು, ಅದಕ್ಕೆ ತಕ್ಕ ಮೇಧಸ್ಸೂ ಇರಬೇಕೆಂಬುದನ್ನು ಆನೆಯ ತಲೆ ತಿಳಿಸುತ್ತದೆ. ಹೊಸವು ಪ್ರವೇಶಿಸುತ್ತಿರುವಾಗ, ಹಳೆಯವು ಜೀರ್ಣವಾಗುತ್ತಿರುವಂತೆ, ಅನಂತಾ ಕಾಶದಲ್ಲಿ ನಕ್ಷತ್ರ ಮಂಡಲಗಳು, ಗ್ರಹಗಳು, ಉಪ ಗ್ರಹಗಳು, ಗೋಳಗಳು, ಲೋಕಗಳು ಪ್ರವರ್ತಿಸಿ ಕೊಂಡಿವೆಯೆಂಬುದನ್ನು ಲಂಬೋದರವು ನೆನಪಿಗೆ ತರುತ್ತದೆ. ಅಂದರೆ ಸೂರ್ಯ ಚಂದ್ರಾದಿ ಗ್ರಹ ಗಳೂ, ಮಹಾ ಮಂಡಲಗಳೂ ಶೂನ್ಯಾಕಾಶದಲ್ಲಿ ಗತಿ ತಪ್ಪದಂತೆ ಅಷ್ಟೊಂದು ಲಾಘುವದಿಂದ ತಿರುಗುತ್ತಿವೆಯೆಂದೂ, ವಿಶ್ವಸ್ವರೂಪವು ತೂಕ ತಪ್ಪದಂತೆ ಪುಟ್ಟಿಲಿಯ ಮೇಲೆ ಆನೆಯ ಸವಾರಿ ಯಂತೆ ಚಿತ್ರಾತಿಚಿತ್ರವಾದ ವಿಜ್ಞಾನದಿಂದ ಈ ಮಹಾಗಣಪತಿ ತುಂಬಿರುತ್ತಾನೆ. ವಿಶ್ವವಿಜ್ಞಾನಕ್ಕೆ ವಿಘ್ನೇಶ್ವರನೊಂದು ಸಂಕೇತ. ಅಂತಲೇ ವಿಜ್ಞಾ ನೇಶ್ವರ ನೆನಿಸುತ್ತಾನೆ.

"ವಿಶ್ವಕ್ಕೆ ಅಧಿನೇತನಾಗಿ, ನಿಯಂತನಾಗಿ ಅಂಕುಶ ವನ್ನು ಧರಿಸಿಕೊಂಡಿದ್ದಾನೆ. ಬುದ್ಧಿ ಬಲಕ್ಕೆ ವಿಘ್ನೇಶ್ವರ ನೊಂದು ಗುರುತು. ಬುದ್ಧಿ ಅತಿರೇಕವಾಗಿ ಹುಚ್ಚುಚ್ಚಾಗಿ ಪ್ರವರ್ತಿಸದಂತೆ, ಮಾವಟಿಗನು ಆನೆಯನ್ನು ನಡೆಸುವ ಹಾಗೆ ವಿಘ್ನೇಶ್ವರನೂ ನಡೆಸುತ್ತಾನೆಂಬುದಕ್ಕೆ ಅಂಕುಶವು ಗುರುತಾಗಿದೆ. ಸರ್ವ ಸೃಷ್ಟಿಗಳೂ ತಮ್ಮ ತಮ್ಮ ಧರ್ಮಗಳಿಗೆ ಕಟ್ಟುಗೊಂಡಿರಬೇಕೆಂತಲೇ ಅವನ ಕೈಯಲ್ಲಿರುವ ಪಾಶವು ಸೂಚಿಸುತ್ತದೆ. ಪರಿಪೂರ್ಣತೆಯಿಂದ ತುಂಬಿದ ಕೊಡವಾಗಿ ತುಳುಕದಿರುವುದನ್ನು, ಅವನ ಕೈಯಲ್ಲಿರುವ ಕಲಶವು ತೋರಿಸುತ್ತದೆ. ವಿಘ್ನಗಳನ್ನು ತರಿದು ಹಾಕಲು ಪರಶುವನ್ನು ಧರಿಸಿದ್ದಾನೆ. ವಿಶ್ವವು ನಾದಾತ್ಮಕವಾದುದು. ಅನೇಕ ಓಂಕಾರ ಝೇಂಕಾರ ಗಳನ್ನು ಧ್ವನಿಸುವ ವಿಶ್ವವೀಣೆಯನ್ನು ವಿಘ್ನೇಶ್ವರನು ಮೀಟುತ್ತಾನೆ. ಚರಾಚರವಾದ ಪ್ರಪಂಚದ ಜೀವ ಕೋಟಿಗಳ ಮೊರೆಗಳನ್ನು ಕೇಳಲಿಕ್ಕೇ ಅಷ್ಟು ದೊಡ್ಡ ಕಿವಿಗಳು. ಕಣ್ಣುಗಳು ಸಣ್ಣವಾದರೂ ಸೂಕ್ಷ್ಮದರ್ಶನ ಶಕ್ತಿಯುಳ್ಳ ನಿಶಿತದೃಷ್ಟಿಯುಳ್ಳವು. ಅಣುರೇಣು ತೃಣಕಾಷ್ಠ ಸಹಿತವಾದ ಬ್ರಹ್ಮಾಂಡಗಳನ್ನೆಲ್ಲಾ ಪರಿಶೀಲಿಸುವ ದೃಷ್ಟಿಗಳು ಅವು. ತಿರುಗಿಕೊಂಡಿರುವ ವಕ್ರತುಂಡಗಳ ಮುಂದೆ ಯಾವ ವಿಘ್ನಗಳೂ ನಿಲ್ಲ

ಲಾರವು. ಆ ಸೊಂಡಿಲು ಎಷ್ಟುದ್ದವಾದರೂ ಸಾಗಿ ಎಷ್ಟು ದೂರದಲ್ಲಿದ್ದುದನ್ನಾದರೂ ಹಿಡಿಯಬಲ್ಲುದು.

"ಇಷ್ಟೇ ಅಲ್ಲದೆ ಸಸ್ಯ ಸಮೃದ್ಧಿಗೂ ವಿಘ್ನೇಶ್ವರನು ಅಧಿನಾಥನಾಗಿದ್ದಾನೆ. ಅವನು ಭೋಜನ ಪ್ರಿಯ ನಾದುದರಿಂದ ಪ್ರಪಂಚದ ಪ್ರಾಣಿಗಳೆಲ್ಲಾ ಹೊಟ್ಟೆಯ ಪಾಡಿಗೇ ಕಾರ್ಯವೆಸಗುವುದನ್ನು ನ್ಯಾಯವೆಂದು ಸೂಚಿಸುತ್ತಾನೆ. ಆಹಾರದಿಂದ ಖಂಡಪುಷ್ಟಿಯೂ, ಅದರಿಂದ ಬುದ್ಧಿಗೆ ಬಲವೂ ಉಂಟಾಗುತ್ತದೆ. ಹಬ್ಬ ಹಾಡಿಗಳನ್ನು ಪ್ರೋತ್ಸಾಹಿಸುವವನು ಗಣಪತಿ. ಬಗೆ ಬಗೆಯ ಭಕ್ಷ್ಯಭೋಜ್ಯಗಳು ಅವನಿಗೆ ಪ್ರಿಯವಾದುದ ರಿಂದ ಜನರಿಗೂ ಪ್ರಿಯವಾಗಿರುತ್ತವೆ. ಭಾದ್ರಪದ ಮಾಸದಲ್ಲಿ ಆನೆಯಂತಹ ಮೇಘಗಳು ಸೊಂಡಿಲು ಗಾತ್ರದ ವರ್ಷಧಾರೆಯನ್ನು ಸುರಿಸುತ್ತವೆ. ಮೇಘ ಗಣಗಳಿಗೂ ಗಣನಾಥನೇ ನಾಯಕ. ವಿಘ್ನೇಶ್ವರನು ಅವತರಿಸಿದ ಈ ದಿನಗಳು ಭಾದ್ರಪದ ಮಾಸವೇ. ಭಾದ್ರಪದ ಶುಕ್ಲ ಚತುರ್ಥಿಯ ದಿನ ವಿಘ್ನೇಶ್ವರನನ್ನು ಅರ್ಚಿಸಿದವರಿಗೆ ವಿಘ್ನಗಳನ್ನು ತೊಲಗಿಸಿಕೊಳ್ಳುವ ಬುದ್ಧಿಬಲವುಂಟಾಗಿ, ಸಂಕಲ್ಪವು ಕಾರ್ಯರೂಪದಲ್ಲಿ ಸಿದ್ಧಿಸುತ್ತದೆ.

"ತನ್ನ ದಂತದ ಕಂಠವನ್ನು ಎತ್ತದೆಯೇ ವಿಘ್ನೇಶ್ವರನು ಬರೆಯುವ ಮಹಾಭಾರತವು ಪಂಚಮ ವೇದವೆನಿಸಿ ಅಕ್ಷರಸಿದ್ಧಿ ಹೊಂದಿ ಪ್ರಪಂಚದಲ್ಲಿ ಚಿರಸ್ಥಾಯಿಯಾಗಿ ನಿಲ್ಲುವಂತಾಗುತ್ತದೆ. ಹೀಗೆಲ್ಲಾ ಇರುವ ಈ ವಿಘ್ನರಾಜನ ಮಹಿಮೆಗಳನ್ನು ವರ್ಣಿಸಲು ನನ್ನ ನಾಲ್ಕು ಮುಖಗಳೂ ಸಾಲವು. ಯಾವ ಕಾರ್ಯ ವನ್ನಾದರೂ ಮಾಡುವುದಕ್ಕೆ ಮೊದಲು, ಈ ವಿಘ್ನೇಶ್ವರನನ್ನು ಧ್ಯಾನಿಸಿ ಪೂಜಿಸಿ ಮತ್ತೆ ಪ್ರಾರಂಭಿಸ ಬೇಕು. ಆಗ ಶುಭವಾಗುತ್ತದೆನ್ನುವುದನ್ನು ತನ್ನ ಅಭಯ ಮುದ್ರೆಯಿಂದ ಸೂಚಿಸುತ್ತಾನೆ. ಮಹಾ ಗಣಪತಿ ಎಲ್ಲರಿಗೂ ಪ್ರಥಮ ಆರಾಧ್ಯ ದೇವನಾಗಿದ್ದಾನೆ !" ಎಂದು ಬ್ರಹ್ಮನು ಹೇಳಿದನು.

ಆಗ ಶಿವನು ಎಲ್ಲರನ್ನೂ ನೋಡಿ, "ಬ್ರಹ್ಮ ವಾಕ್ಯ ಕೇಳಿದಿರಷ್ಟೆ ? ವಿಘ್ನೇಶ್ವರನೇ ಪ್ರಥಮ ಪೂಜ್ಯನಾಗಿರುವನು ! ನಿಜ !" ಎಂದನು.

ಎಲ್ಲರೂ ನಿಜನಿಜವೆಂದು ತಲೆಯಾಡಿಸಿದರು, ನಾರದನು ಹಂಸಧ್ವನಿ ರಾಗವನ್ನು ಮೊಳಗಿಸುತ್ತಿರಲು, ಸರಸ್ವತಿ ಹಂಸಾನಂದಿ ರಾಗವನ್ನು ಹೊಂದಿಸಿದಳು, ಆ ಸಂರಂಭದಲ್ಲಿ ಪಾರ್ವತಿ ಮಹಾ ವಿಘ್ನೇಶ್ವರನ ಮುಂದೆ ನಮಸ್ಕರಿಸಲು ಬಾಗಿದಳು. ಆ ಕ್ಷಣದಲ್ಲಿ ವಿಶ್ವರೂಪನಾಗಿದ್ದ ಗಣಪತಿ ಒಮ್ಮೆಗೇ ಚಿಕ್ಕವನಾಗಿ "ಅಮ್ಮಾ ! ಬೇಡ !" ಎಂದು ಅವಳನ್ನು ತಡೆದು, ತಾಯಿಯ ಕಾಲುಗಳನ್ನು ಎರಡು ಕೈಗಳಿಂದಲೂ ತಬ್ಬಿಕೊಂಡನು, ಕುಬ್ಜ ವಿನಾಯಕ !





# ಅತ್ಯಾಶೆಗೊಂದು ಅಂತ್ಯ

ಚಂದ್ರಪುರವೆಂಬ ಒಂದು ಊರಿನಲ್ಲಿ ಪಾಪಣ್ಣನು ಚಿಕ್ಕದೊಂದು ಅಂಗಡಿಯನ್ನಿಟ್ಟುಕೊಂಡು, ಒಂದಕ್ಕೆರಡು ಲಾಭ ಪಡೆಯುತ್ತ ವ್ಯಾಪಾರ ಮಾಡುತ್ತಿದ್ದ. ಅತ್ಯಾಶೆಯುಳ್ಳವನೂ, ಲೋಭಗುಣದವನೂ ಆದುದರಿಂದ ಹೇಗಾದರೂ ಬಲುಬೇಗನೇ ಕೋಟೀಶ್ವರನಾಗಬೇಕೆಂದು ಹಣವನ್ನು ಗಂಟುಕಟ್ಟುವುದರಲ್ಲೇ ಗಮನವಾಗಿದ್ದನೇ ಹೊರತು, ಅಂಗಡಿಯನ್ನು ದೊಡ್ಡದು ಮಾಡುವ ಕಷ್ಟಕ್ಕೆ ಹೋಗಲಿಲ್ಲ. ಸುಲಭದಲ್ಲಿ ಕೋಟೀಶ್ವರನಾಗಬೇಕೆಂಬುದೇ ಅವನ ಉದ್ದೇಶ.

ಒಂದು ದಿನ ಅವನ ಅಂಗಡಿಗೆ ಬಂದ ಒಬ್ಬ ಮನುಷ್ಯನ ಮೂಲಕವಾಗಿ, ಅರಣ್ಯದಲ್ಲಿ ಒಬ್ಬ ಯೋಗಿ ತಪಸ್ಸು ಮಾಡಿಕೊಂಡಿರುವನೆಂಬ ಸಂಗತಿ ಗೊತ್ತಾಯಿತು. ತುಂಬ ದಯೆಯುಳ್ಳವನೆಂದೂ, ಏನು ಕೇಳಿದರೂ ಅನುಗ್ರಹಿಸುವನೆಂದೂ ತಿಳಿಯಿತು.

ಮರು ದಿನವೇ ಪಾಪಣ್ಣ ಅರಣ್ಯಕ್ಕೆ ಹೋಗಿ, ಆ ಯೋಗಿಯ ಮುಂದೆ ಸಾಷ್ಟಾಂಗ ಬಿದ್ದು ಪ್ರಸನ್ನೀಕರಿಸಿಕೊಂಡು "ಸ್ವಾಮಿ, ತಮ್ಮೊಡನೆ ಏನೂ ಮುಚ್ಚಿಟ್ಟುಕೊಳ್ಳಲಾರೆ. ನನಗೆ ಬೇಗನೇ ಕೋಟೀಶ್ವರನಾಗಬೇಕೆಂದಿದೆ. ಅದಕ್ಕೆ ಸುಲಭವಾದ ಮಂತ್ರವೊಂದನ್ನು ಉಪದೇಶ ಮಾಡಬೇಕು. ನಿಮ್ಮನ್ನೇ ನಂಬಿದ್ದೇನೆ" ಎಂದು ಕೇಳಿಕೊಂಡನು.

ಯೋಗಿ ನಕ್ಕು, "ಅಪ್ಪಾ, ಮನುಷ್ಯನು ಏನನ್ನು ಸಾಧಿಸಬೇಕಾದರೂ ಕಷ್ಟಪಟ್ಟು ಕೆಲಸ ಮಾಡಬೇಕು. ಇದೇ ಸುಲಭವಾದ ಮಂತ್ರ" ಎಂದನು.

ಪಾಪಣ್ಣ ಬಿಡಲಿಲ್ಲ. ಯೋಗಿಯ ಕಾಲುಗಳನ್ನು ಗಟ್ಟಿಯಾಗಿ ಹಿಡಿದು ಬೇಡಿಕೊಂಡನು. ಯೋಗಿ ಬೇಸರದಿಂದ, "ನಿನ್ನ ಆಸೆ ಅಸಮಂಜಸವಪ್ಪಾ. ಬೇರೇನಾದರೂ ಕೇಳು, ಕೊಡುತ್ತೇನೆ" ಎಂದನು.

ಪಾಪಣ್ಣ ಸ್ವಲ್ಪ ಆಲೋಚನೆ ಮಾಡಿ, "ನನಗೆ ದಿವ್ಯ ದೃಷ್ಟಿ ಬರುವ ಹಾಗೆ ವರ ಕೊಡಿ ಸ್ವಾಮಿ" ಎಂದನು.

"ಇದು ಕೂಡಾ ಕೇಳಬಾರದಂಥ ಬಯಕೆಯೇ. ದೊಡ್ಡ ದೊಡ್ಡ ತಪಸ್ಸು ಮಾಡಿದ ಹೊರತು ದಿವ್ಯ ದೃಷ್ಟಿ ಸಿಗಲಾರದು. ಆದರೂ ಕೊಡುತ್ತೇನೆಂದು ಹೇಳಿಬಿಟ್ಟೆನಾದುದರಿಂದ ನಿನ್ನ ಆಸೆಯನ್ನು ಇನ್ನೊಂದು ವಿಧವಾಗಿ ಸಫಲ ಮಾಡುತ್ತೇನೆ. ಇಕೋ" ಎಂದನು.

ಯೋಗಿ ಒಂದು ಅಂಜನದ ಕರಡಿಗೆಯನ್ನು ತೆಗೆದು ಪಾಪಣ್ಣನಿಗೆ ಕೊಟ್ಟು, ಇದರಲ್ಲಿರುವ ಅಂಜನವನ್ನು

ಜಿ. ಸಾಂಬ



ನಿಜಕ್ಕೂ ಕಳ್ಳ ಗಂಗಪ್ಪನೆಂದರೆ ಆ ಪ್ರಾಂತ ದವರನ್ನೆಲ್ಲಾ ಹೆದರಿಸುವ ಚೋರಾಗ್ರೇಸರನೇ. ಚಂದ್ರಪುರದರಾಜನು ಅವನನ್ನು ಹಿಡಿಯಲು ಬಹಳ ಕಾಲದಿಂದ ಪ್ರಯತ್ನಿಸುತ್ತಿದ್ದನು. ಗಂಗಪ್ಪನು ತನ್ನ ಹತ್ತಿರ ಹಣವೇನೂ ಇಲ್ಲವೆಂದು ಎಷ್ಟು ಮೊರೆ ಯಿಟ್ಟರೂ ಕೇಳದೆ ಪಾಪಣ್ಣನ ದುಸ್ತುಗಳನ್ನೆಲ್ಲಾ ತಡವಿನೋಡಿ ಟೊಂಕದಲ್ಲಿ ಸಿಕ್ಕಿಸಿಕೊಂಡಿದ್ದ ಅಂಜನದ ಕರಡಿಗೆಯನ್ನು ಎಳೆದುಕೊಂಡನು.

"ಅಯ್ಯೋ! ಅದು ನನ್ನ ಸರ್ವಸ್ವ! ಮನೆಗೆ ಹೋಗಿ ಹಣವೇ ತರುತ್ತೇನೆ. ಆ ಕರಡಿಗೆ ಕೊಡಯ್ಯಾ" ಎಂದನು ಪಾಪಣ್ಣ.

"ಎಷ್ಟು ಕೊಡುತ್ತೀ?" ಎಂದು ಗಂಗಪ್ಪ ಕೇಳಲು "ಐವತ್ತು ತರುತ್ತೇನೆ" ಎಂದ ಪಾಪಣ್ಣ. "ಛೀ" ಎಂದು ಕಳ್ಳನು ತುಚ್ಛೀಕರಿಸಲು, ಹಣದ ಸಂಖ್ಯೆ ಏರಿಸುತ್ತಾ ಐದು ಸಾವಿರದವರೆಗೂ ಪಾಪಣ್ಣ ಹೇಳುತ್ತಿರಲು, ಗಂಗಪ್ಪನಿಗೆ ಸಂದೇಹವಾಯಿತು. ಕೊಲ್ಲುವೆನೆಂದು ಹೆದರಿಸಿ ಅಂಜನದ ಮಹತ್ವವೇ ನೆಂದು ಕೇಳಿದನು. ಕಡೆಗೆ ಆ ಕಳ್ಳ ಗಂಗಪ್ಪನೊಂದಿಗೆ ಅಂಜನದ ರಹಸ್ಯವನ್ನು ಹೇಳಿಯೇ ಬಿಟ್ಟ ಪಾಪಣ್ಣ.

"ಭಲೇ! ರಾಜನ ಕೋಶಾಗಾರ ದೋಚಲು ನೋಡುತ್ತಾ ಇದ್ದೆ. ಇದರಿಂದ ರಹಸ್ಯ ಮಾರ್ಗ ತಿಳಿಯಬಹುದು. ನನ್ನ ರಹಸ್ಯ ರಾಜನಿಗೆ ಹೇಳಿದರೆ ಸಾಯುವಿ! ನಿನ್ನ ಉಪಕಾರಕ್ಕೆ ಅರ್ಧ ಅಂಜನ ನೀನೇ ಇಟ್ಟುಕೋ" ಎಂದು ಗಂಗಪ್ಪನು ಕರಡಿಗೆಯಲ್ಲಿದ್ದ ಅಂಜನದಲ್ಲಿ ಅರ್ಧವನ್ನು ತೆಗೆದು ತನ್ನ ಹತ್ತಿರವಿದ್ದ ಕರಡಿಗೆಯಲ್ಲಿ ಹಾಕಿಕೊಂಡು, ಉಳಿದ ಕರಡಿಗೆಯನ್ನು ಪಾಪಣ್ಣನಿಗೆ ಕೊಟ್ಟು ಮಾಯವಾದನು.

ಬದುಕಿದೆಯಾ ಬಡ ಜೀವವೇ ಎಂದುಕೊಂಡು ಪಾಪಣ್ಣ ಮನೆಗೆ ಬಂದು, ಕರಡಿಗೆಯನ್ನು ಗೂಡಿ ನಲ್ಲಿಟ್ಟು, ಅಂಗಡಿ ತೆರೆಯಲು ಹೋದನು. ಆ

ಕಣ್ಣಿಗೆ ಹಚ್ಚಿಕೊಂಡರೆ ದಿವ್ಯ ದೃಷ್ಟಿ ಬರುತ್ತದೆ. ಆದರೆ ಒಂದು ಸಾರಿ ಹಚ್ಚಿಕೊಂಡರೆ ಆ ದಿವ್ಯದೃಷ್ಟಿ ಆ ಒಂದು ಸಾರಿಗೆ ಮಾತ್ರವೇ ಫಲಿಸುತ್ತದೆಂದು ನೆನಪಿರಲಿ" ಎಂದನು.

ಪಾಪಣ್ಣನಿಗಾದ ಆನಂದ ಅಷ್ಟಿಷ್ಟು ಎನ್ನುವಂತಿಲ್ಲ, ತಾನು ಕೋಟೀಶ್ವರನಾಗಬೇಕಾದರೆ ಆ ದಿವ್ಯ ಅಂಜನ ವನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ಆಲೋಚಿಸುತ್ತಾ ನಡೆಯುತ್ತಿದ್ದನು.

ಆಗ ಅಕಸ್ಮಾತ್ತಾಗಿ ಅವನ ಇದಿರಿನಲ್ಲಿ, ಕೈಯಲ್ಲಿ ಬಿಚ್ಚುಗತ್ತಿಯನ್ನು ಥಳಥಳಿಸಿಕೊಂಡು ಯಮನಂಥವ ನೊಬ್ಬನು ಧೂತ್ಕೊಂಡು ಬಂದು "ನಿಲ್ಲಲ್ಲಿ!" ಎಂದು ಗರ್ಜಿಸಿದನು.

"ನಾನಾರು ಗೊತ್ತೇನೋ? ಚೋರಾಗ್ರೇಸರ ಗಂಗಪ್ಪ. ಬಾಯಿ ಮುಚ್ಚಿಕೊಂಡು ನಿನ್ನ ಹತ್ತಿರ ವಿರುವ ಹಣವನ್ನೆಲ್ಲಾ ಕೊಟ್ಟು ಪ್ರಾಣ ಉಳಿಸಿಕೋ!" ಎಂದನು ಗಂಗಪ್ಪ.

ಅಂಜನವನ್ನು ಹೇಗೆ ಉಪಯೋಗಿಸುವುದೆಂದು ಆಲೋಚನೆ ಮಾಡಿಕೊಂಡೇ ಇದ್ದನು.

ಪಾಪಣ್ಣನ ಪಕ್ಕದ ಮನೆಯ ರಾಮಣ್ಣನು ಚೆನ್ನಾಗಿ ಬಾಳಿ ಬಡತನಕ್ಕೆ ಬಂದವನು. ಅವನ ಮಗಳು ಲಕ್ಷ್ಮಿಗೆ ಮದುವೆಯ ಮಾತು ನಡೆದು ಹುಡುಗಿ ನೋಡಲು ಈ ದಿನ ಬರುವವರಿದ್ದರು. ಲಕ್ಷ್ಮಿಗೆ ಅಲಂಕಾರ ಮಾಡಿಕೊಂಡಿದ್ದಾಗ, ಕಣ್ಣಿಗೆ ಹಚ್ಚಲು ಕಾಡಿಗೆಯ ಕರಡಿಗೆ ಅಲ್ಲೆಲ್ಲಿಯೂ ಕಾಣಲಿಲ್ಲ. "ಮತ್ತೆ ಹುಡುಕಿದರಾಯ್ತು. ಪಕ್ಕದ ಮನೇ ಚಿಕ್ಕಮ್ಮನ ಹತ್ತಿರ ಕಾಡಿಗೆ ಹಚ್ಚಿಸಿಕೊಂಡು ಬರುತ್ತೇನೆ" ಎಂದು ಹೇಳಿ ಲಕ್ಷ್ಮಿ ಪಾಪಣ್ಣನ ಮನೆಗೆ ಓಡೋಡಿ ಬಂದಳು.

ಪಾಪಣ್ಣನ ಹೆಂಡತಿ ಗೂಡಿನಲ್ಲಿ ಕಾಡಿಗೆಯ ಕರಡಿಗೆಯಂತಿದ್ದ ಅಂಜನದ ಕರಡಿಗೆ ತೆಗೆದು, ಅದ ರಲ್ಲಿದ್ದ ಕಪ್ಪಾದ ಅಂಜನವೇ ಕಾಡಿಗೆ ಎಂದುಕೊಂಡು ಲಕ್ಷ್ಮಿಯ ಕಣ್ಣುಗಳಿಗೆ ಅದನ್ನು ತೀಡಿ ಕಳುಹಿಸಿ ಕೊಟ್ಟಳು.

ಅಲಂಕೃತಳಾಗಿದ್ದ ಮಗಳನ್ನು ನೋಡಿ ರಾಮಣ್ಣ ಚಿಂತಾಭಾರದಿಂದ, "ಬಂಗಾರದಂಥ ಮಗಳನ್ನು ಧನಿಕವರನಿಗೆ ಕೊಡುವ ಮದುವೆ ಹೇಗೆ ಮಾಡಲಿ ? ಹತ್ತು ಮಂದಿಗೆ ಹೇಗೆ ಔತಣ ಮಾಡುವೆನೋ !" ಎಂದು ಉದ್ಗರಿಸಿದನು.

ತಂದೆಯ ಚಿಂತೆಯನ್ನು ನೋಡಿ ಧನಕ್ಕೆ ಏನು ಮಾಡುವುದೋ ಎಂದುಕೊಂಡು ಲಕ್ಷ್ಮಿಯೂ ಚಿಂತಿಸಿ ಕೊಂಡಳು. ಆಗ ಅವಳಿಗೆ ಏನೋ ತೋರಿ, "ಅಪ್ಪಾ, ನಮ್ಮ ತಾತನ ತಾತ ಇಲ್ಲೆಲ್ಲೋ ಭಾರೀ ದೊಡ್ಡ ನಿಧಿ ಹುಗಿದಿಟ್ಟಿದ್ದಾರೆ ಅಂತ ತಾತ ಹೇಳುತ್ತಾ ಇದ್ದರೂ ಅಂತ ಅಜ್ಜಿ ಹೇಳಲಿಲ್ಲವೇ ? ಅದು ತೋಟದ ಈಶಾನ್ಯ ದಿಕ್ಕಿನ ಮೂಲೆಯಲ್ಲೇ ಇದೆ ಅಪ್ಪಾ. ಅಗೆಸಿ ತೆಗೆದುಬಿಡಿ. ಯಾಕೆ ಚಿಂತಿಸ್ತೀರಿ ?" ಎಂದಳು ನಿಶ್ಚಿತ ಸ್ವರದಲ್ಲಿ.



ಶಕುನಪಕ್ಷಿಯ ಹಾಗೆ ಮಗಳು ಹೇಳಿದ ಮಾತು ಕೇಳಿ ರಾಮಣ್ಣ ಅತ್ಯಾಶ್ಚರ್ಯಪಟ್ಟು ನಕ್ಕನು. "ನಿಜ ಅಪ್ಪಾ. ಚಿಕ್ಕಮ್ಮನ ಕಾಡಿಗೆ ಹಚ್ಚಿದ ಕೂಡಲೇ ಕಣ್ಣಿನೊಳಗೆ ಸ್ವಪ್ನ ಕಟ್ಟಿದ ಹಾಗೆ ಆಯಿತು. ಆ ಕಾಡಿಗೆಯಲ್ಲಿ ಏನೋ ವಿಶೇಷವಿರಬೇಕು" ಎಂದಳು.

ರಾಮಣ್ಣ ಮಗಳು ತೋರಿಸಿದ ಸ್ಥಳದಲ್ಲಿ ಎರ ಡಾಳಿನಷ್ಟು ಹೊಂಡ ತೆಗೆದನು. ಆಗ ನಿಜ ವಾಗಿಯೂ ಚಿನ್ನದ ನಾಣ್ಯಗಳು ತುಂಬಿದ ನಿಧಿ ಬಿಂದಿಗೆಗಳು ಕಂಡುಬಂದುವು.

ಲಕ್ಷ್ಮಿ ಕಾಡಿಗೆಯ ವಿಶೇಷವನ್ನು ತಿಳಿಸಲು ಪಾಪ ಣ್ಣನ ಮನೆಗೆ ಓಡಿದಳು. ಆಗ ಬೀದಿಯಲ್ಲಿ ಒಂದು ಡಂಗುರವು ಕೇಳಿಸಿತು. ರಾತ್ರಿ ರಾಜನ ಧನಾಗಾರ ವನ್ನು ಯಾರೋ ಕೊಳ್ಳೆ ಹೊಡೆದರಂತೆ. ಆ ಕಳ್ಳ ನನ್ನು ಹಿಡಿಯಲು ಸಹಾಯ ಮಾಡುವವರಿಗೆ ಮಹಾರಾಜರು ಹತ್ತು ಸಾವಿರ ವರಹ ಬಹುಮಾನ ವಾಗಿ ಕೊಡುವರಂತೆ !

ಲಕ್ಷ್ಮಿ ಪಾಪಣ್ಣನ ಹೆಂಡತಿಯೊಂದಿಗೆ, "ನಿಮ್ಮ ಕಾಡಿಗೆ ಮಹಿಮೆಯುದೇ ನಿಜ. ರಾಜನ ಡಂಗುರ ಕೇಳಿದಿರಷ್ಟೆ? ಆ ಕಾಡಿಗೆಯಿಂದ ಕಳ್ಳರ ಸುದ್ದಿ ರಾಜನಿಗೆ ಹೇಳಿ ಬಹುಮಾನ ಪಡೆಯಬಹುದು ಅಂತ ಕಾಣುತ್ತೆ" ಎಂದಳು.

ಲಕ್ಷ್ಮಿ ಪಾಪಣ್ಣನ ಹೆಂಡತಿಯೊಂದಿಗೆ ಹೀಗೆ ಹೇಳುವಾಗ ಇದಿರುಮನೆಯ ಮೀನಾಕ್ಷಮ್ಮ ಆ ಮಾತುಗಳನ್ನು ಕೇಳಿಕೊಂಡು ಏನೂ ಅರಿಯದವಳಂತೆ ತನ್ನ ಮನೆಗೆ ಹೋಗಿ, ಪಾಪಣ್ಣನ ಮನೆಯ ಮೇಲೆಯೇ ಕಣ್ಣಿಟ್ಟುಕೊಂಡಿದ್ದಳು.

ಪಾಪಣ್ಣ ರಾತ್ರಿ ಸ್ವಲ್ಪ ತಡವಾಗಿಯೇ ಮನೆಗೆ ಬಂದನು. ಅಂಜನವನ್ನು ನೆರೆಮನೆಯ ಲಕ್ಷ್ಮಿಗೆ ತೀಡಿದ ಸಮಾಚಾರವನ್ನೆಲ್ಲಾ ಕೇಳಿ, ಹೆಂಡತಿಯ ಮೇಲೆ ಭುಸ್ಸೆಂದು ರೇಗಿಬಿದ್ದು, "ಹುಂ, ರಾಜನ ಸುದ್ದಿ ನಮಗೆ ಬೇಡ. ಕಳ್ಳನನ್ನು ಹಿಡಿದರೆ ಅಲ್ಪ ಹತ್ತು ಸಾವಿರ ವರಹಗಳು ಮಾತ್ರವೇ. ಕಡೇಪಕ್ಷ ಒಂದು ಲಕ್ಷವಾದರೂ ಸಿಗಬೇಕು. ಬೇಡವೇ ಬೇಡ ಆ ರಗಳೆ!" ಎಂದು ಕೋಪದ ಭರದಲ್ಲಿ ಕೂಗಿ ಹೇಳಿದನು.

ಈ ಎಲ್ಲಾ ಮಾತುಗಳನ್ನೂ, ಕಿವಿಗೊಟ್ಟು ಕೇಳಿದ ಮೀನಾಕ್ಷಮ್ಮನಿಗೆ ಎಲ್ಲವೂ ಪೂರ್ತಿ ಅರ್ಥವಾಯಿತು. ಅವಳು ಬೆಳಗಾದ ಕೂಡಲೇ ಗಂಡನಿಗೆ ಹೇಳತಕ್ಕುದನ್ನು ಹೇಳಿ ರಾಜನ ಬಳಿಗೆ ಕಳುಹಿಸಿದಳು. ಹೀಗೆ ರಾಜನು ಪಾಪಣ್ಣನ ಹತ್ತಿರವಿದ್ದ ಅದ್ಭುತಾಂಜನದ ಸಂಗತಿ ತಿಳಿದು, ಅವನನ್ನು ಕರೆಯಿಸಿ, ಸತ್ಯ ಹೇಳಿ ಸಹಕರಿಸದೆ ಹೋದರೆ ಗಲ್ಲಿಗೇರಿಸುವೆನೆಂದು ಹೆದರಿಸಿದನು. ಉಪಾಯವಿಲ್ಲದೆ ಪಾಪಣ್ಣ ಎಲ್ಲವನ್ನೂ ರಾಜನ ಮುಂದೆ ಹೇಳಿ, ಅಂಜನದ ಕರಡಿಗೆಯನ್ನು ರಾಜನಿಗೆ ಕೊಟ್ಟನು.

"ನನ್ನ ಧನಾಗಾರವು 'ಕೊಳ್ಳಹೊಡೆಯಲ್ಪಡುವ ಸಂಗತಿ ಗೊತ್ತಿದ್ದೂ, ಮುಚ್ಚಿಟ್ಟುಕೊಂಡುದಕ್ಕೆ ನಿನ್ನನ್ನು ಗಲ್ಲಿಗೇರಿಸಲೇಬೇಕು. ಆದರೂ ತಪ್ಪನ್ನು ಒಪ್ಪಿಕೊಂಡಿದ್ದುದರಿಂದ ಕನಿಕರಿಸಿ ಕ್ಷಮಿಸಿ ಬಿಟ್ಟುಬಿಡುತ್ತೇನೆ, ಹೋಗು" ಎಂದು ರಾಜನು ಪಾಪಣ್ಣನನ್ನು ಬರಿಗೈಯಿಂದ ಕಳುಹಿಸಿಬಿಟ್ಟನು.

ಈ ಮೇರೆಗೆ ರಾಜನು ಅಂಜನದ ಸಹಾಯದಿಂದ ಚೋರಾಗ್ರೇಸರ ಗಂಗಪ್ಪನನ್ನು ಹಿಡಿದು, ಅವನು ಕದ್ದು ಸೇರಿಸಿದ ಧನ ಕನಕಗಳನ್ನೆಲ್ಲಾ ಸ್ವಾಧೀನಪಡಿಸಿಕೊಂಡನು. ಇದಕ್ಕೆ ಸಹಾಯಮಾಡಿದವನೆಂದು ಮೀನಾಕ್ಷಮ್ಮನ ಗಂಡನಿಗೆ ಹತ್ತು ಸಾವಿರ ಬಹುಮಾನ ಸಿಕ್ಕಿತು. ಇದನ್ನೆಲ್ಲಾ ನೋಡಿ ಪಾಪಣ್ಣ ಜೀವಚ್ಛವವಾಗಿ ಮೂರು ದಿನ ಇದ್ದು, ಆ ಮೇಲೆ ಚೇತರಿಸಿಕೊಂಡು, ಅತ್ಯಾಶೆಯನ್ನು ಬಿಟ್ಟು ಕಷ್ಟಪಟ್ಟು ಬಾಳುತ್ತ ಮುಂದಕ್ಕೆ ಬಂದನು.



# ಮುಹೂರ್ತಬಲ

ರಾಮಶಾಸ್ತ್ರಿ ಪಂಚಾಂಗ ನೋಡುತ್ತ ಲೆಕ್ಕ ಗುಣಿಸಿ ಹತ್ತು ದಿನಗಳ ಮೇಲೆ ತನ್ನ ಮಗಳ ಸಂಬಂಧ ವಿಷಯ ಮಾತಾಡಲು, ನೆರೆಯ ಊರಿಗೆ ಹೋಗುವ ದಿನವನ್ನು ನಿರ್ಣಯಿಸಿಕೊಂಡನು.

ಹೆಂಡತಿ ಅವನನ್ನು ಅವಸರಪಡಿಸುತ್ತ, "ಹೀಗೆಲ್ಲಾ ಸಾವಕಾಶಮಾಡಿ ಹೋದರೆ ಹೇಗೆ? ಶುಭಸ್ಯ ಶೀಘ್ರಂ ಅನ್ನುತ್ತಾರಷ್ಟೆ? ಬೇಗ ಹೊರಡಿ. ಪಂಚಾಂಗ ನೋಡುತ್ತಾ ದಿನ ಕಳೆಯಬೇಡಿ. ಇಷ್ಟು ಒಳ್ಳೇ ಸಂಬಂಧ ತಪ್ಪಿದರೆ ಮತ್ತೆ ಸಿಗದು. ತಡಮಾಡಿದರೆ ಅವರು ಬೇರೆ ಹುಡುಗಿ ನೋಡಿಕೊಂಡಾರು. ಆದಷ್ಟು ಬೇಗ ಹೋಗಬಾರದೇ?" ಎಂದಳು.

ರಾಮಶಾಸ್ತ್ರಿ ಹೆಂಡತಿಯ ಮೇಲೆ ರೇಗಿ, "ಒಳ್ಳೇ ಮುಹೂರ್ತದಲ್ಲಿ ಪ್ರಾರಂಭಿಸಿದ ಕೆಲಸ ನಿರ್ವಿಘ್ನವಾಗಿ ನೆರವೇರುತ್ತೆ. ಮುಹೂರ್ತಬಲ ನಿನಗೇನು ಗೊತ್ತಿದೆ?" ಎಂದನು.

ಅವನು ನಿರ್ಣಯಿಸಿದ ಮುಹೂರ್ತದ ದಿನದಲ್ಲೇ ಮದುವೇ ವಿಷಯ ಮಾತಾಡಲು ಹೋದನು. ಅಲ್ಲಿ ಮಾತಾಡಿ ಸಾಯಂಕಾಲ ಮನೆಗೆ ಬಂದು ಹೆಂಡತಿಯೊಂದಿಗೆ, "ಮುಹೂರ್ತ ಬಲ ಗಟ್ಟಿಯಾಗಿದ್ದುದರಿಂದಲೇ ಕ್ಷೇಮವಾಗಿ ಮನೆಗೆ ಬಂದೆ!" ಎಂದನು.

"ಏನಾಯಿತು?" ಎಂದು ಕೇಳಿದಳು ಹೆಂಡತಿ.

"ನಾನು ಏರಿಕೊಂಡ ಗಾಡಿ ದಾರಿಯಲ್ಲಿ ಮಗುಚಿಬಿತ್ತು. ನನ್ನ ಹೊರತು ಗಾಡಿಯಲ್ಲಿದ್ದವರಿಗೆಲ್ಲಾ ಭಾರೀ ಪೆಟ್ಟು!" ಎಂದನು ರಾಮಶಾಸ್ತ್ರಿ.

"ಹಾಗಾದರೆ ನೀವು ವರನ ಮನೆಗೆ ಹೋಗಲೇ ಇಲ್ಲವೇ?" ಎಂದು ಕೇಳಿದಳು ಹೆಂಡತಿ.

"ಹೋಗದೇ ಬಿಟ್ಟೇನೆ? ಹೋದೆ. ಅವರು ಮೊನ್ನೆಯೇ ಬೇರೊಂದು ಹುಡುಗೀನ ನಿಶ್ಚಯಮಾಡಿಕೊಂಡರಂತೆ!" ಎಂದನು ರಾಮಶಾಸ್ತ್ರಿ.

ಹೆಂಡತಿ ಹಣೆ ಚಚ್ಚಿಕೊಂಡಳು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೧ ಜೂಲೈ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ







N. Sundararajan

T. V. Seshagiri

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಮೇ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪ್ಯಾ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಮಾರ್ಚಿ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಕಾಡಿಗೆಯಿಂದ ಕಣ್ಣಿಗೆ ಚೆಂದ**

ಎರಡನೇ ಫೋಟೋ: **ಕುಂಕುಮದಿಂದ ಹಣೆಗೆ ಅಂದ**

ಕಳುಹಿಸಿದವರು: ಎ. ಎ. ಪಾಟೀಲ,

ಬೆಳಗಾಂ ಡಿ. ಸಿ. ಸಿ. ಅನಂತಪೂರ, ಕರ್ನಾಟಕ ಸ್ಟೇಟ್

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# A YEARFULL OF READING DELIGHT FROM WALT DISNEY IN











A New Concept
English Fortnightly,



Soon in Indian Languages, too

Watch for the next issue

CHANDAMAMA (Kannada) MAY 1981 Regd. No. M. 5210
everest/80/PP/333 kn